4 ದರ್ತ್ತಿಯಿಂ ನಿನ್ದಳು ತಾನೆನ್ದಿಂ ಬಳಿಕ್ಕೇವ್ರೊಗಳ್ವುದೊ ಕೆಱೆಯಿಂ ಬಾವಿಯಿಂ ಶತ್ರದಿಂ ಪೊಗೊಳನಿಂ
ತೋಂಟಂಗಳಿಂದಾರಮೆಯಿನೆಸೆವ ದೇವಾಲ್ಯದಿಂದಾವಗಂ ಕೋಗಳಯ್ಯೆನೂಱ

5 . . . . ಉತ್ತ . . . ತೋರ್ಕು ॥ ಕಂದ ॥ ಸುರಗಿರಿ . . . ತುಂಗಭದ್ರಾನದಿ-
ಯಿಂ ಕರಮೆಸೆವ ತೆಂಕದೆಸೆಯೊಳ್

6 ಪೇಳಲು . . . . . . . . . . . . ನಂದನಪ್ರಕರದಿಂ . . . . ದಾಚಲ ಕೂಟಕ

7 . . . . . . . ನಿಕುರಂಬದಿಂ . . . . . . . . . . . . . ಶ್ರಿತವಿಸ್ವಂ-
ಭರೆಯೊಳ್ ॥

8 ಸೊಗಯಿಸುತ . . . . . ಮೆಸೆದ ಪೊಳಲ್ಗುನ್ದೆಯೊಳು ರಾಜಿಸಿ . . . . . .
. . . .

9 ವಾನ್ತು ಕೊ . . . . . . . . . . ಜನಪತಿ ನೋಡುತ್ತಿರ . . . .
. . . . .

10 . ತು ಸೌರ್ಯ್ಯದಿನಾ ಬಾವನ್ನ ವೀರರ್ಕ್ಕಳುಮೆನಿಳಿಸಿದಂ ಧಾತ್ರಿಯೊಳು ರಾಯಭೂಪ ॥ ಭರದಿಂ
ಮಾರಾನ್ತ . . . .

11 . . . ದೊಳಲಿದಿರಿದೇ . . ಪೋಗಿ ವಿಸ್ವಂಭರೆಯೊಳ್ . . . . ನಧಿಕಾಶ್ಚ-
ರ್ಯ್ಯನು . . . . . . . . . . . ಗದಿಂ ಸಾರ್ವ್ವಭೌಮ॥

12 ಕನ್ದ॥ ಸೆಂಬಳಿಯ ಮೂಂಕೆನಂ . . ಬಿಡೆಬಿಡೆ ಬಿಟ್ಟ ತೆಱೆ ಪೆಱೆ . . ಗಿರೆ . ರ್ಕ್ಕಂಬಿನ
ಮರ . . ಗುಂ ಬನ್ನಿಪ . . . . ಕೊನ್ದ ರಾಯ॥ ನರಪತಿ ನೋಡುತ್ತಿರಲುರ-

13 ವರಿಯಂ ಕೊಂಡುಯ್ದು ರಾಜಿಯಂ ನೆಱೆ ಮೂವತ್ತರಡುಮೆಳೆಯಿ . ತನ್ದರಸಂಕಲಲಾಟತಿಳಕನೇಂ
ಕೇವಳಮೆ ॥ವೃತ್ತ॥ ಅಡಕೆಯಂಬಿಗನಾಳೆವರಿಯ . . . . ಪತಿ

14 ಕೊಂಯ್ದೊಡೆ ನಡುಕೋಱಿಲೆ ಪೋದುದು ತಗುರ್ಕ್ಕಿದೊಡೆಯೆ ಘರಿಯಲ್ಲನಲ್ಕೆ ತೋಳುಡಿದು ನೆಲಕ್ಕೆ
ವಿೞ್ದು(ರ್) ದೆಡೆವೆತ್ತು ಕಱುತ್ತಿರದಟ್ಟೆ ಮುಟ್ಟೆ ನಟ್ಟೊಡೆ . . . . ಳಲ್ತುದೆನೆ . .

15 ದಿರಾರ್ಬ್ಬರುದಂಕಭೀಮನೊಳ್ ॥ವಚನ॥ ಇನ್ತನೇಕಸಾಹಸಂಗಳ್ಗೆ ನೆಲೆಯಾದ। ಸ್ವಸ್ತಿ ಸಮಧಿಗತಪಂಚ-
ಮಹಾಶಬ್ದ ಮಹಾಸಾಮನ್ತಂ ವೀರಲಕ್ಷ್ಮೀಕಾನ್ತಂ ನುಡಿದು

16 ಮತ್ತನ್ನಂ। ಸುಜನಪ್ರಸನ್ನಂ ಗೋತ್ರಪವಿತ್ರಂ ಪರಾಂಗನಾಪುತ್ರಂ ಅಸಹಾಯಶೌರ್ಯ್ಯಂ ಭೃಗುಮತಾ-
ಚಾರ್ಯ್ಯಂ ಅರಸಂಕಶಂಖರಂ ಬಿರುದಭಯಂಕರಂ ಮೂರು-

17 ರಾಯಸ್ಥಾನಕಲಿಬಿರುದಸುರಿಗೆಕಾರ ಚಿತ್ತಚಮತ್ಕಾರಂ ವೀರಾವತಾರಂ ಚತುಷ್ಷಷ್ಟಿಯೋಗಿನೀಲ-
ಬ್ಧವರಪ್ರಸಾದಂ ದಾನವಿನೋದಂ ನೀತಿನಾರಾಯಣ ಸೆಂಬಳಿ-

18 [ನಾ]ರಾಯಣಂ ಶ್ರೀಬಾಳೇಶ್ವರದೇವಪಾದಾಬ್ಜಭೃಂಗಂ ವಿಕ್ರಾನ್ತತುಂಗಂ ನಾಮಾದಿಸಮಸ್ತಪ್ರಸಸ್ತಿ-
ಸಹಿತಂ ಶ್ರೀಮನ್ಮಹಾಸಾಮನ್ತ ಚಾಮುಣ್ಡರಸರ್ ಪೊಳಲ್ಗು(ಂ)ನ್ದಯುಮಂ

19 ಸಪ್ತಾರ್ದ್ಧಲಕ್ಷೆಯೊಳೆಲ್ಲವಂಕಗದ್ಯಾಣಮುಮ(ಂ)ನರಮನೆಯಂಕಂಗಳ ಜೀವಿತದೊಳು ದಶವನ್ಧ-
ಮುಮಂ ಸುಖದಿನಾಳುತ್ತಮಿರೆ ದೇವೇನ್ದ್ರವಿಮಾನಸಮಾನಮಾಗಿ

20 ದೇಗುಲಮಂ ಮಾಡಿಸಿ ಸಿವಲೋಕಪ್ರಾಪ್ತನಾದಿಂ ಬಳಿಕ ॥ ಕನ್ದ ॥ ಆತನ ತನಯಂ ಭುವನಖ್ಯಾತಂ
ಗಜರಿಪುಪರಾಕ್ರಮಂ ಸಕಳಗುಣ[ವ್ರಾ]ತಂ ವಿಸಿಷ್ಟಜನಸಂಘಾ-

21 ತಂ ವಿಕ್ರಾನ್ತತುಂಗನೆನಿಪಂ ಗಂಗ ॥ ಚಾರುಚರಿತ್ರನೆಂದು ಬುಧಬಾನ್ಧವನೆ[ನ್ದು] ವಿವೇಕಿಯೆನ್ದು
ವಿಸ್ತಾರಿತಕೀರ್ತ್ತಿಯೆಂದು ಸುಚಿಯೆಂದು ಗುಣಾಕರನೆಂದು ವಿಶ್ವವಿದ್ಯಾರಮ-

22 ಣೀಮನೋರಮಣನೆನ್ದು ದಯಾಪರನೆಂದು ಬಣ್ಣಿಕು ಧಾರಿಣಿ ಗಂಗನಂ ಸುಲಲಿತಾಂಗನನಾದಿಬುಧ-
ಪ್ರಸಂಗನ ॥ ಕಲಿತನಮುಂಟು [ದಾನ]ಗುಣಮುಂಟು ಸುಖಾ-

23 ಸ್ಪದಮುಂಟು ಮಿಕ್ಕ ದೋರ್ವ್ವಳದೊದವುಂಟುಪಾರ್ಜ್ಜಿತಯಶೋಧನಮುಂಟು ವಿವೇಕಮುಂಟು ನಿಶ್ಚಳತೆ
ವಿಶೇಷಮುಂಟು ಸೊಬಗುಂಟು ಸುಭಾವಹಮುಂಟು ಚಾರುನಿರ್ಮ್ಮಳತರಭಾ-

24 ವಮುಂಟು ಪರಿಭಾವಿಸಿ ನೋರ್ಪ್ಪಡೆ ಗಂಗಭೂಪನೊಳು ॥ ಕದನದೊಳಾನ್ತರಾತಿಬಳಮಂ ತವಿಪಲ್ಲಿಗಿವಂ
ಕೃತಾನ್ತನೆಂಬುದು ನರನೆಂಬುದು ಪರಮೇಶ್ವರನೆಂಬುದು ಕಾರ್ತ್ತಿ-

25 ಕೇಯನೆಂಬುದು ಫಣಿವೈರಿಯೆಂಬುದು ವೃಕೋದರನೆಂಬುದು ಕಾಳಸೇನನೆಂಬುದು ರಘುಜಾತನೆಂಬುದು
ಧರಾವಳಯಂ ಕಲಿಗಂಗಭೂಪನ॥ ಬಗೆಯಲ್ಕಮ್ಮಿರ್ನ್ನೊಳಾ-

26 ಪ್ಪರ್ನ್ನೊಳ್ ವಿಭವದೊಳ್ ಚಾತುರ್ಯ್ಯದೊಳ್ ಶೌರ್ಯ್ಯದೊಳ್ ಮಿಗಿಲಮ್ಮಮ್ಮಿವನಮ್ಮನಿಂದಮೆನಿ-
ಪೊಂದಾಳಾಪದೊಳ್ತೊಂದೆಗಿಂದೆಗಿಯೊಳ್ ನೂರ್ವ್ವರಿಸಕ್ಕೆ ದಲು ಪಿರಿಯನೆಂಬನಿಂತು

27 ನಾನಾವಿಧಂ ನೆಗರ್ದ್ದಂ ಗಂಗನರಾತಿಭೂಭುಜಮನೋಭಂಗಂ ಧರಾಚಕ್ರದೊಳ್ ॥ ಸ್ವಸ್ತಿ ಸಮಧಿಗತ-
ಪಂಚಮಹಾಶಬ್ದ ಮಹಾಮಂಡಳೇಶ್ವರಂ ವೀರಮಹೇಸ್ವರಂ ನುಡಿ-

28 ದನ್ತೆಗಂಡ ಸಮರಪ್ರಚಣ್ಡಂ ವೈರಿಮದಭಂಜನಂ ಸ್ವಾಮಿಮನೋರಂಜನಂ ವಿನಯಾಂಬುರಾಸಿ ಗುಣಗ-
ಣೋದ್ಭಾಸಿ ಕಾಮಿನೀಕಾಯಂ ಕೋದಂಡರಾಮಂ ವಿಮಳಚರಿ-

29 ತ್ರಂ ಗೋತ್ರಪವಿತ್ರಂ ದಾನವಿನೋದಂ ಮೃಗಮದಾಮೋದ ಪರನಾರೀದೂರಮೇಕಾಂಗವೀರಂ ಹಯವತ್ಸ-
ರಾಜನಾದಿತ್ಯತೇಜ ವಿಂಧ್ಯಾದೇವೀಲಬ್ಧವರಪ್ರಸಾದ ಬುಧಜನಾಹ್ಲಾ-

30 ದಂ ಶ್ರೀಮತ್ತ್ರಿಭುವನಮಲ್ಲದೇವಪಾದಾಬ್ಜಭೃಂಗನಯ್ಯನಸಿಂಗಂ ನಾಮಾದಿಸಮಸ್ತಪ್ರಸಸ್ತಿಸಹಿತಂ
ಶ್ರೀಮನ್ಮಹಾಮಂಡಳೇಸ್ವರಂ ಗಂಗರಸರು ಮಾಸವಾಡಿ ನೂಱನಾ-

31 ಲ್ವತ್ತುಮಂ ಪೊಳಲ್ಗುಂದೆಯುಮಂ ಸಪ್ತಾರ್ಧಲಕ್ಕೆಯೊಳಂಕಗದ್ಯಾಣಮುಮಂ ಚಕ್ರವರ್ತಿಯರಮನೆ-
ಯಂಕಂಗಳಂ ಜೀವಿತದೊಳ್ ದಸವನ್ಧಮುಮಂ ಸುಖದಿನಾಳುತ್ತಮಿರ್ದ್ದು

32 ಸುಪುತ್ರಃ ಕುಳದೀಪಕ ಯೆಂಬ ಪುರಾಣವಾಕ್ಯಮಂ ತನ್ನೊಳು ನನ್ನಿಮಾಡಿ ತಮ್ಮಯ್ಯಂ ಚಾವುಂಡ-
ರಸಂ ಮಾಡಿಸಿದ ಬಾಳೇಶ್ವರದೇವರ್ಗ್ಗೆ ಚಕ್ರವರ್ತಿಗೆ ಬಿನ್ನಪಂಗೆಯ್ದು

33 ತ್ರಿಭೋಗಾಭ್ಯಂತರಸಿದ್ಧಿಯಾಗೆ ಪಡೆದು ॥ ಸ್ವಸ್ತಿ ಸಮಸ್ತಗುಣಸಂಪನ್ನಂ ನುಡಿದುಮತ್ತೆನ್ನಂ ಗೋತ್ರ-
ಪವಿತ್ರಂ ಪರಾಂಗನಾಪುತ್ರಂ ನೀತಿಚಾಣಿಕ್ಯಂ ಸುಜನಮಾಣಿ-

34 ಕ್ಯಂ ಚಲದಂಕರಾಮಂ ಸಂಗ್ರಾಮಭೀಮಂ ಸಾಹಸೋತ್ತುಂಗನಯ್ಯನಸಿಂಗಂ ನಾಮಾದಿಸಮಸ್ತಪ್ರಸಸ್ತಿ-
ಸಹಿತಂ ಶ್ರೀಮತು ಪೊಳಲ್ಗುಂದೆಯೆಱಕಗಾವುಂಡನ ಕಯ್ಯಲು

35 ಸಹಿರಣ್ಯಸಹಿತಂ . . . . ಧಾರಾಪೂರ್ವ್ವಕಂ ಮಾಡಿಸಿ ಕರಿಯನೆಲಂ ಮತ್ತರ್ನ್ನೂಱು ಗಹ್ದೆ ಮತ್ತ-
ರೊಂದುಮಂ ಪಡೆದು @ಸ್ವಸ್ತಿ ಸಂಸಾರಪಾರಾವಾರಮದಜಳಮಹಾ-

36 . ಯಾಸೋತ್ತುಂಗತರಂಗಭಗ್ನಮಗ್ನಾನೇಕಪ್ರಾಣಿಜಾತಿಕರಿಮಕರತಿಮಿತಿಮಿಂಗಿಳಪ್ರಭೃತಿಪ್ರಕ್ಷುಭಿ-
ತಾವರ್ತ್ತಗರ್ತ್ತಾನ್ತಸ್ಪತಿತಸಿವಾನುಗೃಹೀತಶಿಷ್ಟಜನೋತ್ತರಣಕಾ-

37 ರಣಸಾಮರ್ತ್ಥ್ಯ . . . . . ಬಲಿನ್ದ ಮಾರವಿನ್ದನನ್ದನಮುನಿದಿವ್ಯವನ್ದಿತಸುನ್ದರಚರಣಾರವಿನ್ದ
ಶ್ರೀಮಲ್ಲಕುಚೀಶ್ವರದೇವಮುಖಕಮಳವಿನಿರ್ಗ್ಗತಸಕಳಶಾ-

38 ಸ್ತ್ರಾರ್ತ್ಥ . . . . ರಪ್ಪ [ಮುದಿನೀರ] ತೀರ್ತ್ಥದ ರಾಮೇಶ್ವರದ ಶ್ರೀಮಲೆಯಾಳಪಂಡಿತದೇವ-
ರ ಶಿಷ್ಯರು ಜ್ಞಾನೇಸ್ವರಪಣ್ಡಿತದೇವರು ಅವರ ಶಿಷ್ಯರು ಶ್ರೀಸೋಮೇಸ್ವರಪಂ-

39 ಡಿತದೇವರು ಅವರ ಶಿಷ್ಯರು ಶ್ರೀಸಾಂತರಾಸಿಪಂಡಿತದೇವರು ಅವರ ಶಿಷ್ಯರು ॥ ವೃ ॥ ಹರಹಸನಕ್ಕೆ ದೇವ-
ಕುಧರಕ್ಕೆ ಸಿತಾಂಬುರುಹಕ್ಕೆ ಮೌಕ್ತಿಕಾಭರಣ-

40 ಗಣ . . . . . . . ಗಜಕ್ಕೆ ಗರಧಗಫೇನಪಿಂಡನಿವಹಕ್ಕೆ ಮುಕುಂದಮಕುಟಸೋಭೆಗೆ ದೊರೆ-
ಯೆನಿಸಿತ್ತೊ ಭಾವಿಸೆ ಕಳೇಸಮುನೀಶಯಶಂ ಧರಿ-

41 ತ್ರಿಯೊ . . . . . . . . . . . . ಮೂರ್ತ್ತಿಯಂ ವಿನಯಸಮಾಧಿಶೀಲಗುಣಶೌಚ-
ಚರಿತ್ರತಪಃಪ್ರಭಾವದೊಳ್ ಮನುಮುನಿಸಂದಗಸ್ತ್ಯ

42 . . . . . . . . . ಸಿವಕಾನ್ತಪರ್ತ್ತವಗೆಣೆಯೆಂದು ಬಣ್ಣಿಸೆ ಖಳೇಸ್ವರಪಣ್ಡಿತರೇಂ ಕೃತಾ-
ರ್ತ್ಥರೋ ॥ ಕಂದ ॥ ವಿನಯನಿಧಿ ಸತ್ಯದಾಗರ ಮನುಧರ್ಮ್ಮಚಾರಿ-

43 . . . . . . . . . ನಿಳಯ ಮುನಿತಿಳಕ ಮುನಿಜನೋತ್ತಮ ಮುನಿವಂದಿತನೆನಿಸಿದಂ ಖಳೇ-
ಸ್ವರಮುನಿಪಂ ॥ ಸ್ವಸ್ತಿ ಯಮನಿಯಮಾಸನಪ್ರಾಣಾಯಾಮಪ್ರ

44 . . . . . . . . . . ನುಷ್ಠಾಣಜಪಸಮಾಧಿಸೀಳಸಂಪನ್ನರಪ್ಪ ಶ್ರೀಮತು ಕಳೇಸ್ವರ-
ಪಣ್ಡಿತದೇವರ್ಗ್ಗೆ ಚಾಳುಕ್ಯವಿಕ್ರಮಕಾಲದ [೧]೭ ನೆಯ

45 ಶ್ರೀಮುಖ[ಸಂವತ್ಸರದ ಭಾ]ದ್ರಪದದಮಾವಾಸ್ಯೆ ಬೃಹಸ್ಪತಿವಾರ ಸೂರ್ಯ್ಯಗ್ರಹಣ ಸಂಕ್ರಾನ್ತಿ ವ್ಯ-
ತೀಪಾತವಿಂತೀ ತಿಥಿಗಳು ಕೂಡಿದ ಪುಣ್ಯದಿನ

46 . . . ಶ್ರೀಬಾಳೇಸ್ವರದೇವರ್ಗ್ಗೆ ಸ . . . ಗೆಯ ಕೊಟ್ಟು ಶ್ರೀಮತ್ಕಳೇಶ್ವರಪಣ್ಡಿತ-
ದೇವರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಮಾಡಿ ಗಂಜಿಗೆಱೆಯ ಕೆಳಗೆ ದೇವ

47 . . . ಕೊಟ್ಟ ಮತ್ತರೊ[ಂದು] ಅಲ್ಲಿಂ ಮುಂದೆ ಬಟ್ಟ ಬೆದ್ದಲೆ ಕರಿಯನೆಲಂ ಮತ್ತಱು ಮೂಱು
ಅವರೊಳಗೆ ದೇವರಂಗಭೋಗಕ್ಕೆ ಮತ್ತರು ಪನ್ನೆರಡು ಪಣ್ಡಿತದೇವರ್ಗ್ಗೆ ಮತ್ತ-

48 ರು ಪನ್ನೆರಡು . ತ್ರಿರ್ಗೆ ಮತ್ತರು ಪನ್ನೆರಡು ಬೆಟ್ಟದ ಭಗವತಿಗೆ ಮತ್ತಱು ಆಱು ಪಱೆಕಾರರ್ಗ್ಗೆ
ಮತ್ತರು ಪನ್ನೆರಡು . . . . . . . ಕಾಱರ್ಗ್ಗೆ ಮತ್ತುರು ಪನ್ನೆರಡು [ಪಾ]ತ್ರ(ಂ)

49 ಮ್ಮೊಱಕ್ಕೆ ಮತ್ತರು ಪದಿನಯ್ದು . . . . . . . ಮತ್ತಱು ಪದಿನಾಱು ಸೂಳೆವಳಂಗೆ ಮ-
ತ್ತರು ಮೂಱು॥ ಅನ್ತಾ ಪೊಲದ ಸೀಮೆ ಮೂಡಲ್ಮೋರಿಂಗೆಱೆಯ ಪೊಲ-

50 ದ ಮೇರೆ ತೆಂಕಲ್ಮತ್ತಗಿಯ ಪೊಲದ ಪಡುವಲ್ಮತ್ತಗಿಗೆ ಪೋಪ ಬಟ್ಟೆಯ ಮೇರೆ ಬಡಗ ಚಿಕ್ಕಪುಣಿಸೆಯ
ಮೇರೆ ಈ ಸ್ಥಾನದಲಿರ್ದ್ದ ತಪೋಧನರು ಬ್ರಹ್ಮಚರ್ಯ್ಯಮುಳ್ಳ

51 ತಪೋ . . . ಬ್ರಹ್ಮಚರ್ಯ್ಯಮಿಲ್ಲದರಂ ಕಳೆದವರ ಸಂತತಿಯ ಬ್ರಹ್ಮಚರ್ಯ್ಯಮುಳ್ಳ ತಪೋ-
ಧನರಂ ನಿಲಿಸುವುದು ಈ ಧರ್ಮ್ಮವಂ ಪ್ರತಿಪಾ[ಳಿ]ಸಿದವರ್ಗ್ಗೆ ವಾರಣಾಸಿ ಪ್ರ-

52 ಯಾಗೆ ಅರ್ಗ್ಘ್ಯತೀರ್ತ್ಥ ಕುರುಕ್ಷೇತ್ರ ದೊಳ್ಸಾಸಿರ [ಕವಿಲೆಯ ಕೋ]ಡುಂ ಕೊಳಗುಮಂ ರತ್ನದೊಳ್ಕ-
ಟ್ಟಿಸಿ ಚತುರ್ವ್ವೇದಪಾರಗರಪ್ಪ ಬ್ರಾಹ್ಮಣರ್ಗ್ಗುಭಯಮುಖಿಗೊಟ್ಟ

53 ಫಲಮಕ್ಕು ಈ ಧರ್ಮ್ಮಮನಳಿದಾತಂ ವಾರಣಾಸಿ ಪ್ರಯಾಗೆ ಅರ್ಗ್ಘ್ಯತೀರ್ತ್ಥ ಕುರುಕ್ಷೇತ್ರದೊಳ್ಸಾಸಿರ
ಕವಿಲೆಯುಮಂ ಸಾಸಿರ್ವ್ವತ[ರ*]ಪೋಧನರುಮಂ ಸಾಸಿರ್ವ್ವಬ್ರಾಹ್ಮಣ-

54 ರುಮಂ ಕೊಂದ ಪಂಚಮಹಾಪಾತಕನಕ್ಕು ॥ ಶ್ಲೋಕ॥ ಸಾಮಾನ್ಯೋಯಂ ಧರ್ಮ್ಮಸೇತುರ್ನ್ನೃಪಾಣಾಂ
ಕಾಲೇ ಕಾಲೇ ಪಾಲನೀಯೋ ಭವದ್ಭಿಃ । ಸರ್ವ್ವಾನೇತಾನ್ ಭಾಗಿನಃ ಪಾರ್ತ್ಥಿವೇಂದ್ರಾಃ ಭೂಯೋ
ಭೂಯೋ

55 ಯಾಚತೇ ರಾಮಚಂದ್ರ[ಃ*] ॥ ಸ್ವದತ್ತಾಂ ಪರದತ್ತಾಂ ವಾ ಯೋ ಹರೇತಿ ವಸುಂಧರಾಂ ಷಷ್ಟಿರ್ವ್ವ-
ರ್ಷಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ॥

56 ಶ್ರೀಬಾಳೇಶ್ವರದೇವರ್ಗ್ಗೆ ಗಾವುಂಡ ಅಱುವತ್ತೊಕ್ಕಲು ದೇವರ ಪರ್ಯ್ಯಳಕ್ಕೆ ಸೊಂದಗೊಲ ದೇವ-
ಗೌಡನ . . ಲಿ ಬಿಟ್ಟ ಹ-

57 ಣ ಕೊಟ್ಟಲ್ಲಿ ೧ ಕೊಂಡಲ್ಲಿ ೧ ವಿಚಾರ ಮುದ್ರಾಣ ಹೊಂಗಾ ೧ . . ತೆಲ್ಲಿಗರಲ್ಲಿ ಸೊಂಟಿಗೆ ೧
ಧಾನ್ಯಗೊಳಗ ೧ ಕೆಱೆಯ

58 ಕೆಳಗೆ ಗದ್ದೆ ೨೦೦ ಕಂಬ ಕಾಳಿಯದೇವಯ್ಯ . . . ನೇಶ್ವರದಲ್ಲಿ . . .

. . . . . . . [1]

## No. 164.

(*A. R. No.* 42 *of* 1904.)

ON A SLAB SET UP IN FRONT OF THE CENTRAL SHRINE OF THE KUMARASVAMI TEMPLE AT KUDATINI, BELLARY TALUK, SAME DISTRICT.

This is dated **Chāḷukya-Vikrama year 23, Bahudhānya, Mārgaśira, ba. 7, Bṛihaspativāra** corresponding to **A.D. 1098 November 18 Thursday** and refers itself to the reign of the Chāḷukya king **Tribhuvanamalladēva** ruling from **Kalyāna.** The *Mahāpradhāna Daṇḍanāyaka* **Sōmēśvarabhaṭṭōpādhāya** and the *Daṇḍanāyaka* **Mahāvishṇuvarasa,** noted for their firm resolution and bravey, **Viśvarūpa-Brahmachārin,** all ***Dēśikajanas*** and the five *Vargas* of **Koṭṭitoṇe** made an agreement that **Sāvimōja,** son of **Eraṇiga-Mādōja,** and **Chikka-Mādōja,** son of **Bēchōja,** who, convert Lokki gold coins into peacock-coins should give peacock-coins of the same weight as Lokki coins and (that in consideration of the profit) they should pay 12 *gadyāṇas* to the temple of the god Svāmidēva. Mahāvishṇuvarasa is also said to have made a gift of some toll-revenue for the service of the same god.

1 Three lines below this are completely effaced.

1 ಸ್ವಸ್ತಿ ಶ್ರೀರ್ಜ್ಜಯಶ್ಚಾಭ್ಯುದಯಶ್ಚ । ಜಯತ್ಯಾವಿಷ್ಕೃತಂ ವಿಷ್ಣೋರ್ವ್ವಾ-
2 ರಾಹಂ ಕ್ಷೋಭಿತಾರ್ಣ್ಣವಂ ದಕ್ಷಿಣೋನ್ನತದಂಷ್ಟ್ರಾಗ್ರವಿಶ್ರಾನ್ತಭುವನಂ ವಪುಃ॥
3 ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀಪೃಥ್ವೀವಲ್ಲಭ ಮಹಾರಾಜಾಧಿರಾ-
4 ಜ ಪರಮೇಶ್ವರ ಪರಮಭಟ್ಟಾರಕ ಸತ್ಯಾಶ್ರಯಕುಳತಿಳಕ ಚಾಳುಕ್ಯಾ-
5 ಭರಣಂ ಶ್ರೀಮತ್ತ್ರಿಭುವನಮಲ್ಲದೇವರ ವಿಜಯರಾಜ್ಯಮುತ್ತರೋತ್ತರಾಭಿ-
6 ವೃದ್ಧಿಪ್ರವರ್ದ್ಧಮಾನಮಾಚಂದ್ರಾರ್ಕ್ಕತಾರಂ ಸಲುತ್ತಂ ರಾಜಧಾನಿ ಕಲ್ಯಾಣಪು-
7 ರದ ನೆಲೆವೀಡಿನೊಳ್ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ
8 ಸ್ವಸ್ತಿ ಯಮನಿಯಮಸ್ವಾಧ್ಯಾಯಧ್ಯಾನಧಾರಣಮೌನಾನುಷ್ಠಾನಜಪಸಮಾ-
9 ಧಿಸೀಳಗುಣಸಂಪನ್ನರ್ವ್ವಿದಿತವೇದಾರ್ತ್ಥತತ್ವರಭಿನವಶಾಖಲ್ಲ್ಯರಿಗ್ವೇದರತ್ನಾಕ-
10 ರರಷ್ಟಾದಶಧರ್ಮ್ಮಶಾಸ್ತ್ರಕುಶಲರಾಶ್ರಿತಜನಕಲ್ಪವ್ರಿಕ್ಷರ್ಬ್ಬನ್ಧುಜನಾಧಾ-
11 ರರ್ಶ್ಶಿಷ್ಟೇಷ್ಟವಿಬ್ಧಜನಾನಂದಸಂದೋಹಮೌರ್ಮ್ಮನಗೋತ್ರಪವಿತ್ರರ್ವ್ವೇದಮಿತ್ರರ್ದ್ವಿ-
12 ನಾನಾಥಾನುಕಂಪಾಪರರಭಿಮಾನಮೇರುಗಳೇಕವಾಕ್ಯರಚಲಿತಧೈ-
13 ರ್ಯ್ಯರ್ಶ್ಶೌರ್ಯ್ಯಚಾಂಜನೇಯರ್ಮ್ಮನುಮಾರ್ಗ್ಗಚರಿತರ್ಪ್ಪು(ಂ)ಣ್ಯತಪಾರಿಜಾತರ್ನ್ನಾಮಾದಿಸ-
14 ಮಸ್ತಪ್ರಸಸ್ತಿಸಹಿತಂ ಶ್ರೀಮತ್ತ್ರಿಭುವನಮಲ್ಲಬೇವರಾರಾಧ್ಯರಪ್ಪ
15 ಶ್ರೀಮನ್ಮಹಾಪ್ರಧಾನಂ ದಣ್ಡನಾಯಕಂ ಶ್ರೀಮುದಯ್ಯಂಗಳು ಸೋಮೇಶ್ವರ-
16 ಭಟ್ಟೋಪಾಧ್ಯಾಯರುಮವರ ಮೈಯ್ದುನಂ ದಣ್ಡನಾಯಕಂ ಮಹಾವಿಷ್ಣುವರ-
17 ಸರುಂ ಸ್ವಸ್ತಿ ಸಮಧಿಗತಪಂಚಮಹಾಶಬ್ದ ಬ್ರತಜಪನಿಯಮಹೋಮಸಂ-
18 ಯುಕ್ತ ಶ್ರೀಸ್ವಾಮಿಕಾರ್ತ್ತಿಕೇಯದೇವತಪೋವನಾಧಿಪತಿಗಳಪ್ಪ ದಣ್ಡಾಸನೀ
19 ವಿಶ್ವರೂಪಬ್ರಹ್ಮಚಾರಿಗಳುಂ ಸ್ವಸ್ತ್ಯನೇಕಯುಗವರ್ತ್ತಮಾನಮಹಿಮಾಸ್ಪದಪ್ರ-
20 ಸಿದ್ಧಶುದ್ಧಾನ್ವಯರ್ಸ್ಸಮಸ್ತದೇಸಿಕಜನಾಧಾರರುಂ ಶ್ರೀಸ್ವಾಮಿಕಾರ್ತ್ತಿಕೇಯಪಾ-
21 ದಪದ್ಮೋಪಜೀವಿಗಳಪ್ಪ ಶ್ರೀಮತ್ಕೋಟಿತೂಣೆಯ ಸ್ಥಾನದಯ್ಯವರ್ಗ್ಗಮುಮಿರ್ದ್ದು
22 ಸ್ವಸ್ತಿ ಶ್ರೀಮಚ್ಚಾಳುಕ್ಯವಿಕ್ರಮಕಾಲದ ೨೩ ನೆಯ ಬಹುಧಾನ್ಯಸಂ-
23 ವತ್ಸರದ ಮಾರ್ಗಸಿರ ಬಹುಳ ೭ ಬ್ರಿಹಸ್ಪತಿವಾರದಂದು ಎರಣಿಗ ಮಾ-
24 ದೋಜನ ಮಗಂ ಸಾವಿಮೋಜನುಂ ಬೇಚೋಜನ ಮಗಂ ಚಿಕ್ಕಮಾದೋಜನುಂ
25 ಶ್ರೀಸ್ವಾಮಿದೇವರ ನವಿಲಚ್ಚಿನ ಪೊನ್ನಂ ಲೊಕ್ಕಿಯ ಪೊನ್ನಾಣೆಯು(ಂ)ಮಾಪೊನ್ನ
26 ತೂಕಮುಮಾಗಿ ಪೊಯ್ದು ಸಲಿಸುವರು ಶ್ರೀಸ್ವಾಮಿದೇವರ್ಗ್ಗೆ ವರ್ಷನಿಬನ್ಧ-
27 ದಿಂ ತೆಱುವ ಗದ್ಯಾಣ ಪನ್ನೆರಡು ಗಳಂತಿಗೆಯಲು ಪುಟ್ಟಿದಾಯಮೊಳಗೆ ಲೊಕ್ಕಿ-
28 ಯು ನವಿಲುಮಾಗಿ ಪೊನ್ನವಣ ಚಿ(ಂ)ನ್ನಮನಾಯ್ದು ಕಳೆದು ನಿನ್ದನ್ತಪ್ಪ ಚೊಣ್ಣ-
29 ಭಂಗಾರಮಂ ಪತ್ತಂಟಿನಿಳಿಪಿಸಲ್ ಕೊಟ್ಟಾಚಂದ್ರಾರ್ಕ್ಕತಾರಂಬರಂ ಸುಖಮುಣ್ಬರು
30 ಇನ್ತೀ ಮರ್ಯ್ಯಾದೆಯನಾರೊರ್ವ್ವರ್ತ್ತಪ್ಪದೆ ಪ್ರತಿಪಾಳಿಸಿದರಪ್ಪಡೆ ಶ್ರೀಸ್ವಾಮಿ-
31 ದೇವರೆಕ್ಕೋಟಿತೀರ್ತ್ಥದಲುಂ ವಾರಣಾಸಿಕುರುಕ್ಷೇತ್ರದಲುಂ ಸೂರ್ಯ್ಯಗ್ರಹಣ-
32 ದಲು ಸಹಸ್ರಬ್ರಾಹ್ಮಣರ್ಗ್ಗೆ ಸಹಸ್ರಕಪಿಲೆಗಳಂ ದಾನಂಗೆಯ್ದ ಫಳ । ಈನ್ತೀ
33 ಮರ್ಯ್ಯಾದೆಯನಾವನೊರ್ವ್ವನಳಿದನಪ್ಪಡೆ ಯಾ ತೀರ್ತ್ಥಂಗಳಲಾ ತಿಥಿ-
34 ಯಲುಮನಿತುಂ ಬ್ರಾಹ್ಮಣರುಮನನಿತು ಕಪಿಲೆಯುಮಂ ಸ್ವಹಸ್ತದಿಂದಳಿ-
35 ದ ಮಹಾಪಾತಕನಕ್ಕು । ಯಾವನೊರ್ವ್ವಂ ದಾಳಿವಿಟ್ಟತನಂ ಗೆಯ್ದನಪ್ಪಡೆ ಪಂ-
36 ದಿ ಸತ್ತುದು ನಾಯಿ ಸತ್ತುದು ಸ್ವಾನ ಗಾರ್ದ್ದಪಚಾಂಡಾಳರು ಜಾತಿಗುಂ ವೃತ್ತಿಗಂ ಬಹಿ [॥*]
37 ಸ್ವದತ್ತಾಂ ಪರದತ್ತಾಂ ವಾ ಯೋ ಹರೇತಿ ವಸುಂಧರಾಂ। ಷಷ್ಟಿರ್ವ್ವರ್ಷಸಹಶ್ರಾಣಿ
38 ವಿಷ್ಟಾಯಾಂ ಜಾಯತೇ ಕ್ರಿಮಿ[ಃ*] ॥ ಸಾಸನಮಂ ಬರದಂ ಹಿಣ್ತಿಯ ಸಾವಿಮಯ್ಯಂ-
39 ಗಳ ಮಗಂ ದುಗ್ಗಿಮಯ್ಯಂ ॥ ಸ್ವಸ್ತಿ ಸಮಸ್ತಪ್ರಸಸ್ತಿಸಹಿತಂ ಶ್ರೀಮ-
40 ದೆಚ್ಚಪನ್ನಾಯದಧಿಷ್ಠಾಯಕಂ ಶ್ರೀಮದ್ದಣ್ಡನಾಯಕಂ ಮಹಾವಿಷ್ಣುವರಸ-
41 ರು ಶ್ರೀಸ್ವಾಮಿದೇವರಂಗಭೋಗಕ್ಕೆ ಕೊಟ್ಟತ್ತಣೆಯಲಿರ್ದ್ದ ಪನ್ನಾಯದ ಸುಂಕಮಂ
42 ನೋರ್ಪ್ಪವರುಂ ತಿಂಗಳ್ಗೆರಡು ಗದ್ಯಾಣ ಪೊನ್ನ(ಂ)ನಿಲ್ಲಿ ಮಾಱಿದ ಸ್ತಳವಿಕ್ರಯ ವೊ-
43 ದಲಾಗಿ ಯಲ್ಲಿಯಾದೊಡೊಂದಂ ಕೊಡುವುದು ಈನ್ತೀ ಧರ್ಮ್ಮಮಂ ಸ್ತಳದ ಹನ್ನವಣಿಗರುಂ ಕಡಾ-
44 ಯದ ಕೋಲ್ಕಾಱರುಂ ಪುರಸ್ಸರಾಗಿ ನಡಸುವುದು। ಈ ಧರ್ಮ್ಮಮನಳಿದಂ ಪಂಚಮಹಾ-
45 ಪಾತಕ । ಮಂಗಳ ಮಹಾಶ್ರೀ ಶ್ರೀಶ್ರೀಶ್ರೀ[॥*]

## No. 165.

(*A.R. No.* 213 *of* 1918.)

ON A SLAB SET UP NEAR THE KALLESVARA TEMPLE AT KURUVATTI, HARAPANAHALLI TALUK, SAME DISTRICT.

This is dated **Chālukya-Vikrama year 24, Pramāthin, Jyēshṭha, śu. paurṇamāsī, Ādityavāra, Sōma-grahaṇa** corresponding to **A.D. 1099 June 5 Sunday,** when there was a lunar eclipse, and refers itself to the reign of the Chāḷukya king **Tribhuvanamalla-dēva,** under whom **Surēśvara-Paṇḍitadēva** was ruling **Beṇṇevūr twelve.** It records the grant of land and taxes on grass, firewood, vegetables, fruits and cotton exported from and imported into the village **Kuṟuvatti,** together with a money grant, for the service of the god Abhinava-Sōmēśvara and for feeding ascetics in the temple, made by the two-hundred *Mahājanas* of the village with their chief Kāḷidāsa, in the presence of **Lakuḷīśvara-Paṇḍita.** It describes the genealogy of the *Daṇḍanāyaka* **Kāḷidāsa** and the warlike and religious spirit of the two-hundred learned Brāhmans of Kuṟuvatti. Kāḷidāsa is described as a Brāhman of Viśvāmitra-*gōtra* and is called *gōtra-pavitra.* Lakuḷīśa-Paṇḍita's spiritual teachers are also named. The record has excellent poetical merits. It is stated to have been composed by **Śrīkaṇṭhasūri.** The engraver was **Kaḷōja.**

1 ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ । ತ್ರೈಳೋಕ್ಯನಗರಾರಂಭಮೂಳಸ್ತಂಭಾಯ ಶಂ-
ಭವೇ ॥

2 ನಮಸ್ತಾಮ್ರಜಟಾಜಾಳಬಾಳಪಲ್ಲವಶಾಳಿನೇ । ತ್ರೈಳೋಕ್ಯನಗರಾರಂಭಪೂರ್ಣ್ಣಕುಂಭಾಯ ಶಂ-
ಭವೇ ॥

3 ಜಯತ್ಯಾವಿಷ್ಕೃತಂ ವಿಷ್ಣೋರ್ವ್ವಾರಾಹಂ ಕ್ಷೋಭಿತಾರ್ಣ್ಣವಂ ದಕ್ಷಿಣೋನ್ನತದಂಷ್ಟ್ರಾಗ್ರವಿ-
ಶ್ರಾನ್ತಭುವನಂ ವಪುಃ ॥

4 ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ
ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ ಶ್ರೀಮತ್ತ್ರಿಭುವ-

5 ನಮಲ್ಲದೇವರ ವಿಜಯರಾಜ್ಯಮುತ್ತರೋತ್ತರಾಭಿವೃದ್ಧಿಪ್ರವರ್ದ್ಧಮಾನಮಾಚಂದ್ರಾರ್ಕ್ಕತಾರಂಬರಂ ಸ-
ಲುತ್ತಮಿರೆ ಸ್ವಸ್ತಿ ಯಮನಿಯಮಸ್ವಾಧ್ಯಾಯಧ್ಯಾನಧಾರಣಮೌನಾ-

6 ನುಷ್ಠಾನಜಪಸಮಾಧಿಶೀಳಸಂಪನ್ನ ವಿಬುಧಜನಮನೋಭಿವಾಂಛಿತಫಳಸಮುತ್ಪನ್ನ ದೀನಾನಾಥಜಠರ-
ದಾವಪಾವಕನಿವಾರಣ ದುರಿತಗಜಮದನಿವಾ-

7 ರಣ ನಿಜಸಮಯಸಂರಕ್ಷಣೈಕದಕ್ಷ ಅನವರತಸುಭಿಕ್ಷ ಪಣ್ಡಿತಚೂಡಾಮಣಿ ಶಿಷ್ಟಜನಚಿನ್ತಾಮಣಿ ಶ್ರೀ-
ವಾದಿದೇವಪಣ್ಡಿತದೇವಪಾದಾರಧನ-

8 ಲಬ್ಧವರಪ್ರಸಾದ ಪರೋಪಕಾರವಿನೋದ । ಇತ್ಯಾದಿ ನಾಮಾವಳೀಸಮಾಳಂಕೃತರಪ್ಪ ಶ್ರೀಮತ್ಸುರೇಶ್ವರ-
ಪಣ್ಡಿತದೇವರು ಬೆಣ್ಣೆವೂರ್ಪನ್ನೆರಡುಮಂ ಸು-

9 ಖದಿನಾಳುತ್ತಮಿರೆ ಆ ನಾಡೊಳಗ್ರಹಾರಂ ಭೂನಾರೀಹಾರಮಧಿಕವಿಬುಧಾಧಾರಂ ಶ್ರೀನಾರಿಗಿರಲ-
ಗಾರಂ ಭೂನಿಧಿ ಕುಱುವತ್ತಿರ್ ನೋಡೆ ಸೊಗಯಿಸುತಿ-

10 ರ್ಕ್ಕು ॥ ಇನ್ತು ನೆಗೞ್ದಗ್ರಹಾರಾಭ್ಯನ್ತಿಕದೊಳು ತುಂಗಭದ್ರೆ ಪಶ್ಚಿಮಮುಖದಿಂ ಸನ್ತತವಾಹಿನಿಯೆನೆ-
ಲಿನ್ತಿನ್ತೆಂದೀ ಗ್ರಾಮವಿಭವಮಂ ಬಣ್ಣಿಪರಾರ್ ॥

11 ಈ ಗ್ರಾಮಮನೂರೊಡೆಯನನಗ್ರಸುಖಂ ಜ್ಞಾತಿವರ್ಗದಿರ್ದ್ದಿರ್ವ್ವಗ್ಗೆನ್ತಗ್ರೇಸರನೊಲ್ದಿತ್ತನುದಗ್ರಮ-
ನಂ ಕಾಳಿದಾಸದಂಡಾಧೀಶ ॥ ವೃತ್ತ ॥ ಭುವನವಿನೂತಕೀರ್ತ್ತಿವನಿತಾಪ್ರಿ-

12 [ಯ]ನೆಂದು ಪರೋಪಕಾರಿಯೆಂದವನತಪಾಳನೈಕಪಟುವೆಂದು ಧರಾಮರಪೂಜ್ಯನೆಂದು ಮಾನವನಯ-
ಶಾಳಿಯೆಂದಸಮಸಾಹಸನೆಂದು ವಿನೀತನೆಂದು ಬಾನ್ಧವಸು-

13 ರಭೂಜಮೆಂದವನಿ ಬಣ್ಣಿಸುತಿರ್ಪ್ಪುದು ಕಾಳಿದಾಸನ ॥ ಸುತ್ರಾಮಸಮಂ ವಿಭವದೊಳತ್ರೀಕ್ಷಣಜಾತ-
ನನ್ನನಾಶ್ರಿತಜನದೊಳು ಗೋತ್ರಪವಿತ್ರಂ ವಿಶ್ವಾಮಿತ್ರಾನ್ವಯವಾರ್ದ್ಧಿ-

14 ಚಂದ್ರನೆಂದೆಳೆ ಪೊಗಳ್ಗುಂ ಪರಹಿತದೊಳು ವಿದ್ಯಾಧರಪರಿವೃಢಂ ಸ್ವಾಮಿಭಕ್ತಿಯೊಳು ಪವನಜನಂ
ಪರಮೌದಾರ್ಯ್ಯದೊಳಂಗೇಶ್ವರನನಧಃಕರಿಸಿ ಕಾಳಿದಾಸನ್ನೆಗಟ್ದಂ ॥
15 ವೃತ್ತ ॥ ತತ್ತನಯರ್ಸ್ಸಮಸ್ತಗುಣಸಂಯುತರಲ್ಲಿಯುಮೋರ್ವ್ವ ಸೂನು ಲೋಕೋತ್ತಮನಿಷ್ಟಬಾಂಧವ-
ಜನಾವಸಥಂ ಗುಣಿ ಸೋಮನಾಥನತ್ಯುತ್ತಮವೃತ್ತರಾತನೊಡವುಟ್ಟಿದರಿರ್ವ್ವ-
16 ರುಮಿಲ್ಲಿ ಗಂಡರಾದಿತ್ಯನುಮಾಶ್ರಿತಾಂಬುರುಹಮಿತ್ರರೆನಲು ಧರೆ ಬರ್ಮ್ಮದೇವನು॥ ಆ ನೆಗಟ್ದ ಸೋಮನಾ-
ಥನ ಸೂನು ಸುಚಾರಿತ್ರನಮಳಗುಣಗಣಪಾತ್ರಂ ಸಾನುನ-
17 ಯಂ ಮನುಜರೊಳಭಿಮಾನಧನಂ ಕಾಳಿದಾಸನಿಷ್ಟಾವಾಸ । ಇನ್ತರೊಡೆಯಪ್ರಮುಖಂ ಸನ್ತತವಿನ್ನ-
ರ್ವ್ವರಬಳರಂ ಪಾಳಿಸುತಂ ಹಂತೃಗಳಮ್ಮೂಳಿಸಿ ನಿಶ್ಚಿನ್ತಂ ಸುಖದಿಂದಮಿರ್ದ್ದ-
18 ರಾಜ್ರ್ಜಿತಧರ್ಮ್ಮರ್ । ಇನ್ನರ್ವ್ವರ ಪ್ರಭಾವಮನೆನ್ನಂದಿಗರಳವೆ ಬಣ್ಣಿಸಲು ಭಾವಿಪೊಡಾ ಪನ್ನಗವರನ
ಪಿತಾಮಹನನ್ನರ್ಗ್ಗಮತರ್ಕ್ಯಮೆನ್ದೊಡಾವಂ ಪೊಗಳ್ವಂ ॥ ವೃತ್ತ ॥ ಶರಣಾ-
19 ಯಾತಜನಕ್ಕೆ ವಜ್ರಕವಚಮ್ಮಾಶಾನ್ತ ವೀರಂಗೆ ಕೇಸರಿ ಬಾಯಿವಿಟ್ಟರೆದೆಂಗೆ ಕಲ್ಪಮಹೀಜಂ ಶಾಸ್ತ್ರಕ್ಕೆ
ತಾನಾಸ್ಪದಂ ಪುರುಷಾರ್ತ್ಥಕ್ಕೆ ತವರ್ ಶ್ರುತಿಸ್ಮೃತಿಗೆ ತಾಂ ಲೀಳಾಗೃ-
20 ಹಂ ಧರ್ಮ್ಮದಾಕರಮಿನ್ತೀ ಕುಱುವತ್ತಿರ್ವತ್ತ ಮಹಿದೇವಾನೀಕಮಿನ್ನರ್ವ್ವರು । ಪ್ರಭುಮೊದಲಾಗಿ-
ನ್ನರ್ವ್ವರ ಶುಭಕರ್ಮ್ಮದಿನಿಲ್ಲಿ ತುಂಗಭದ್ರಾತಟದೊಳು ವಿಬು-
21 ಧಾಭಿನವಸೋಮೇಶಂ ಭುಭುಮುಕುಟನಿಘೃಷ್ಟಚರಣಯುಗನುದಯಿಸಿದೆ ॥ ವೃತ್ತ ॥ ತ್ರಿಭುವನಸಂಭವ-
ಸ್ಥಿತಿಲಯಂಗಳಗೋರ್ವ್ವನೆ ಕರ್ತ್ತನೆಂದು ಸನ್ದ ಭ-
22 ವನಿಕಾಯಸಂಸರಣಘೋರಮಹಾರ್ಣ್ನವಕರ್ಣ್ನಧಾರನೆನ್ದಭಿನಯಿಪನ್ತೆ ದಕ್ಷಿಣಸುರಾಪಗೆಯೊಳು ನೆರ-
ಯಲ್ಕೆ ಬನ್ದನೊಲ್ದನಭಿನವಸೋಮನಾಥ-
23 ನಮರೋತ್ಕರನಾಥನನಾಥನವ್ಯಯ ॥ ಅಭಿನವಸೋಮೇಶೋದಯಮಭಿಮತಫಳದಾನಧುರ್ಯ್ಯಮೆ-
ನ್ದಾದರದಿಂ ಪ್ರಭುಮೊದಲಾಗಿನ್ನರ್ವ್ವರು-
24 ಮಭಿನವಸೋಮೇಶ್ವರಾಶ್ರಮಕ್ಕೈತರ್ತನ್ದರ್ ॥ ವಚನ ॥ ಬಂದನೇಶ್ವರನು ಭುವನಭಾಸ್ವರನುಂ ವಿಶ್ವೇ-
ಶ್ವರನುಮಪ್ಪಮಭಿನವಸೋಮೇಶ್ವರನ ಕಂಡು ನಿಟಿಳತಟಪರಿಘ-
25 ಟಿತಕರಕಮಳಕುಟ್ಮಳರಾಗಿ ನಾಮಿದೇವರ್ಗ್ಗಂಗಭೋಗಾದಿನಿಮಿತ್ತಮಾಗಿ ವೃತ್ತಿಯಂ ಬೀರುವಮಪ್ಪ-
ದಾರ್ಯ್ಯರುಮವಾರ್ಯ್ಯವೀರ್ಯ್ಯರುಮಚಳಿತ-
26 ಧೈರ್ಯ್ಯರುಂ ಬ್ರಹ್ಮಚರ್ಯ್ಯವ್ರತಧುರ್ಯ್ಯರುಮಪ್ಪಾಚಾರ್ಯ್ಯರಾಗಲ್ವೇಳ್ಕುಮನ್ತಪ್ಪವರಿನ್ದಮೀ
ಧರ್ಮ್ಮಂ ಸ್ವಧರ್ಮ್ಮದಿನ್ನಡೆಗುಮನ್ತಪ್ಪವರುಮೀ ಕಲಿಕಾಳದೊಳು
27 ಕಲಿಕಾಲಭಯಪಳಾಯಿತಧರ್ಮ್ಮಾಚರಣರುಂ ಗುರುಕುಳಸಮುದ್ಧರಣರುಂ ಕಶ್ಮೀರದೇವಸನ್ತಾನವಾ-
ರ್ದ್ಧಿವರ್ದ್ಧನಸುಧಾಕರರುಮಮಳಗುಣಾಕರರುಮಪ್ಪ ಲಕುಳೀಶ್ವರಪಂಡಿತರವರ ಸನ್ತಾನಮೆ-
ನ್ತೆನ್ದೊಡೆ ॥ ಕನ್ದ ॥ ನೀರಾಗರ್ಸ್ಸಕಳಾಗಮವಾರಿಧಿಪಾರಗರಶೇಷಶಾಸ್ತ್ರಪ್ರವಣರ್ಕ್ಕಾರುಣಿಕರೆಂದು
ಪೊಗಳ್ಗುಂ
29 ಧಾರಿಣಿ ಕಶ್ಮೀರದೇವರಂ ಸಾದರದಿ ॥ ಆಮುನಿಪುಂಗವಶಿಷ್ಯರ್ಕ್ಕಾಮಮದಕ್ರೋಧಲೋಭವರ್ಜ್ಜಿತಾಖಿಳ-
ಪ್ರಾಮಾಣಿಕಜನವಂದ್ಯರ್ಸ್ಸೋಮೇಶ್ವರಪಂಡಿತರ್ದ್ಧರಾ-
30 ಮಂಡಳದೊಳ್ ॥ ತಚ್ಛಿಷ್ಯರ್ಹರಹಾಸಸ್ವಚ್ಛಯಶರ್ಸ್ಸಕಳಶಾಸ್ತ್ರಪಾರಗರುದ್ಯತ್ಸ್ವಚ್ಛಯಜಯಿಗಳು
ಜಗದೊಳತುಚ್ಛಗುಣಜ್ಞಾನಶಕ್ತಿ-
31 ಪಂಡಿತದೇವರ್ ॥ ವಚನ ॥ ಆ ತಾರ್ಕಿಕಚಕ್ರವರ್ತ್ತಿ ಪಂಡಿತದೇವಾಪರನಾಮಧೇಯರಪ್ಪ ಜ್ಞಾನಶಕ್ತಿಪಂ-
ಡಿತರ ಶಿಷ್ಯರ್ ॥ ಕಂದ ॥ ವಿದ್ಯಾವಧೂಮು-
32 ಖಾಬ್ಜಪ್ರದ್ಯೋತನರಾಗಮಪ್ರ ವೀಣರ್ವ್ವಿಜಿತಪ್ರದ್ಯುಮ್ನಪ್ರಾಬಲ್ಯರ್ಸ್ಸದ್ಯೋಜಾತಬ್ರತೀಶ್ವರರ್ಭೂರ್ಭ್ಭ-
ತಳದೊಳ್ ॥ ಅವರ ಶಿಷ್ಯರು ॥ ಸಕಳಾಗಮವಿದರಾ-
33 ಶಾಪ್ರಕಟಿತಕೀರ್ತ್ತಿಗಳಶೇಷಶಾಸ್ತ್ರಪ್ರವಣರ್ಮ್ಮಕರಧ್ವಜಶೌರ್ಯ್ಯಹರರ್ಲ್ಲಕುಳೀಶ್ವರಪಂಡಿತರ್ದ್ಧರಿತ್ರೀ-
ತಳದೊಳ್ ॥ ವಚನ ॥ ಇನ್ತು ನೆಗಳ್ದಭಿನವಸೋ-
34 ಮೇಶ್ವರದೇವಸ್ಥಾನದಾಚಾರ್ಯ್ಯರಪ್ಪ ಶ್ರೀಮಲ್ಲಕುಳೀಶ್ವರಪಂಡಿತರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕ-
ಮ್ಮಾಡಿ ಚಾಳುಕ್ಯವಿಕ್ರಮವರಿಷದ ೪೪ ನೆಯ ಪ್ರ-
35 ಮಾಥಿಸಂವತ್ಸರದ ಜ್ಯೇಷ್ಠ ಶುದ್ಧ ಪೌರ್ಣ್ನಮಾಸಿ ಆದಿತ್ಯವಾರ ಸೋಮಗ್ರಹಣದಂದು ಸ್ವಸ್ತಿ ಯಮ-
ನಿಯಮಸ್ವಾಧ್ಯಾಯಧ್ಯಾನಧಾರಣಜಪಸಮಾ-

36 ಧಿಶೀಲಸಂಪನ್ನರು । ಸುಜನಪ್ರಸನ್ನರು । ಅತಿಪವಿತ್ರನಿಜಗೋತ್ರಶತಪತ್ರಮಿತ್ರರು । ಮನುಮುನಿಚರಿತ್ರರು।
ಶ್ರುತಿಸ್ಮೃತೀತಿಹಾಸಪರಾಶರಾದಿಮುನಿಪ್ರಣೀ-
37 ತಪುರಾಣಸಂದರ್ಭ್ಭಶರಣರು ಬ್ರಾಹ್ಮಧರ್ಮ್ಮಸಮುದ್ಧರಣರು । ಮೀಮಾಂಸಾದಿಶಾಸ್ತ್ರಪಾರಾವಾರ-
ಪಾರೋತ್ತರಣಧುರ್ಯ್ಯರು ಅಚಲಿತಧೈರ್ಯ್ಯರು ದೀನಾಭಿ-
38 ಜನಮುನೀಷಿಮಾನವನಿಕಾಯಕುಕಕುಳಫಳಿತಸಹಕಾರರು ಶರಣಾಗತವಜ್ರಪ್ರಾಕಾರರು । ಅಗಣಿತಗುಣ-
ಗಣದ್ವಿಗುಣಿತಯಶ[ಃ*]ಪ್ಪಟಲಪಾಂಡು-
39 ರಿತದಿಗ್ವೇದಂಡರು ಕದನಪ್ರಚಂಡರು ಕಲಿಕಾಲಖಳಪ್ರಭಾವಾಭಿಭೂತಭ್ರೀತಿಧಾವಿತಧರ್ಮ್ಮಸಮುದ್ಧರಣ-
ಧೌರೇಯರು । ಸತ್ಯರಾಧೇಯರು । ಅಭಿನವ-
40 ಸೋಮೇಶ್ವರದೇವಚರಣಸರಸೀರುಹಾರಾಧನಾಸಮಾಸಾದಿತವರಪ್ರಸಾದರು ಪರಸುಖಪ್ರಮೋದರು । ಇ-
ತ್ಯಾದಿನಾಮಾವಳೀವಿರಾಜಮಾನರಪ್ಪ
41 ಶ್ರೀಮತ್ಕುಱುವತ್ತಿಯಊರೊಡೆಯಪ್ರಮುಖಮಹಾಜನಮಿನ್ನೂರ್ವ್ವರು ಪರಮಪ್ರೇಮದಿಂದಭಿನವಸೋ-
ಮೇಶ್ವರದೇವರಂಗಭೋಗಕ್ಕಂ ತಪೋಧನರಾ-
42 ಹಾರದಾನಕ್ಕಮ್ಮಾಟಕೂಟಕ್ಕಂ ತಱಂಬೆಯ ಪೊಲದ ಹಗರಣಿಗನ ಬಾಗಿಂ ಪಡುವಣ ದೆಸೆಯಲಿ ದಿನಗುಣಿ-
ಗನ ಮೂಱು ಮತ್ತರು ಪೆರಸು ಕೊಟ್ಟ ಗುಣಿ-
43 ಗನ ಮತ್ತರ್ ೧೫ ಅಲ್ಲಿ ಮ್ಮೂಡಲು ಸೇನಬೋವ ದೇವಪಯ್ಯನ ಕೆಯ್ಯಿಂ ಬಡಗಣ ದೆಸೆಯಲು ಸಾಂದೆರ
ಸೂರಯ್ಯನ ಕೈಯ್ಯಲು ಮಾಱುಗೊಂಡು ಬಿ-
44 ಟ್ಟ ಗುಣಿಗನ ಮತ್ತರ್ ೬। ಅಂತರಮುಂ ಸ್ಥಳದಲಿದುಸಹಿತಂ ಸರ್ವ್ವಬಾಧಾಪರಿಹಾರಮಾಗಿ ಬಿಟ್ಟ ಗುಣಿ-
ಗನ ಮತ್ತರ್ ೨೧। ಮತ್ತಮ್ಮೂಡಣ ಬಟ್ಟೆಯಲು ತೃಣಕಾ-
45 ಷ್ಠಶಾಕಫಳಮ್ಮೊದಲಾಗಿ ಬರ್ಪ್ಪ ವಸ್ತುವಿಂಗೆ ಸುಂಕಮುಮಂ ಕೊಟ್ಟರು । ಊರೊಡೆಯ ಕಾಳಯಣ್ಣ-
ನ್ತೋಟ ಪಸುಗೆಯುಮೀರೆಡೆಯ ಮಕ್ಕಿ ಸಹಿತಮ್ಮೂಱಂ
46 ಸ್ಥಳದಲು ಗುಣಿಗನ ಮತ್ತರ್ ೨। ಗೋವಿಂದರಸನ ಕಾಳಯಣ್ಣ ಮಕ್ಕಿ ಮತ್ತರ್ ೧। ಕಮ್ಮ ೬೦೦ ಮಾಕ-
ಳಯ್ಯನ ದಾಸಿಯಣ್ಣ ಮಕ್ಕಿ ಗುಣಿಗನ ಮತ್ತರ್ ೧। ಕತ್ತಿಗೆ-
47 ಯ ಸಾಲಿಯಣ್ಣ ಮಕ್ಕಿ ಕಮ್ಮ । ೧೦೦ । ನೂಳಿಗೆಯ ತಿಪ್ಪಣ್ಣ ಮಕ್ಕಿ ಕಮ್ಮ । ೩೦೦ । ಈಶ್ವರಯ್ಯನ
ಕಾಳಯಣ್ಣ ಮಕ್ಕಿ ಕಮ್ಮ । ೨೦೦ । ಚವುಂಡಯಷಣಂಗಿಯ-
48 ರ ಮಗಮ್ಮಾರಯ್ಯನುಂ ತಮ್ಮಂ ದೇವಪಯ್ಯನುಮವರ ಮಗನೀಶ್ವರಯ್ಯನು ಮಕ್ಕಿ ಕಮ್ಮ । ೩೦೦ ।
ಅವರಳಿಯಮ್ಮದ್ದೆಯಷಣಂಗಿಯುನ್ತಮ್ಮಂ ಚಾಕಣ್ಣನುಂ ಮಕ್ಕಿ್ಗ ಕ-
49 ಮ್ಮ। ೨೦೦। ಏರಂಡರನಾರಣಯ್ಯಮ್ಮಕ್ಕಿ್ಗ ಕಮ್ಮ । ೨೦೦ । ಅವರ ತೀಕಣ್ಣಂ ಮಕ್ಕಿ್ಗ ಕಮ್ಮ । ೨೦೦ ।
ಕಾಳದಾಸಕ್ರಮಿಂತರು ಮಕ್ಕಿ್ಗ ಕಮ್ಮ । ೬೦೦ । ಮೌನದ ಮಾಹಣ್ಣಂ ಹರಕುಂದೆ-
50 ರ ತೀಕಿಮಯ್ಯನ ಕಾಳಯ ಕೈಯ್ಯಲು ಕೊಂಡು ಬಿಟ್ಟ ಮಕ್ಕಿ್ಗ ಕಮ್ಮ । ೪೦೦ । ಅನ್ತು ಮಕ್ಕಿ್ಗ ಗುಣಿ-
ಗನ ಮತ್ತರ್ . ೭ । ಕಮ್ಮ ೪೦೦ ಧರ್ಮ್ಮರಸನ ದೇಕಣ್ಣನುಂ ವಾಮಣ್ಣನುಂ ಹರಳಗು-
51 ಣಿಗನ ಮತ್ತರ್ ೨। ಹೆವ್ವಾರುವ ಚವುಂಡಮಯ್ಯನುಂ ದೇವಪಯ್ಯನುಂ ಹರಳುಗುಣಿಗನ ಮತ್ತ ೨।
ಹಂಚಿಕಬ್ಬೆಯ ದೇವಪಯ್ಯನುಂ ಸೋಗೆಯ ಶಿವಣ್ಣನುಮೊಂ-
52 ದೇ ಸ್ಥಳದಲು ಹರಳು ಮತ್ತರು ೨। ಅನ್ತು ಹರಳುಗುಣಿಗನ ಮತ್ತರ್ ೬। ಚಿಕ್ಕಸಾ(೦)ವಿಯಣ್ಣಂ ಕೆಂ-
ಗಾಡು ಗುಣಿಗನ ಮತ್ತರ್ ೫। ಮಾಬಲಯ್ಯನ ತೀಕಣ್ಣನುನ್ತಮ್ಮಂ ಕಾಳಿ-
53 ದಾಸಿಯುಂ ಕಳಱುಗುಣಿಗನ ಮತ್ತರ್ ೧। ಕತ್ತಿಗೆಯದಾವ(೦)ಣ್ಣಂ ಕಳಱು ಗುಣಿಗನ ಮತ್ತರ್ ೧। ಅನ್ತು
ಕಳಱು ಗುಣಿಗನ ಮತ್ತರ್ ೨। ಹರಕುಂದರ ಬಮ್ಮಣ್ಣನುನ್ತಮ್ಮಾಮಾ-
54 ಹಣ್ಣನುಂ ಗದ್ದೆ ಕಮ್ಮ । ೧೨೦ । ತಳಾಱ ಚಂದಿಯಣ್ಣಂ ಗದ್ದೆ ಕಮ್ಮ ೧೨೫ । ಸೋನರ ದಾಸಪುಕ್ಷ-
ಣಂಗಿ ಗದ್ದೆ ಕಮ್ಮ ।೧೨೦। ಈಶ್ವರಯ್ಯನ ಬಮ್ಮಣ್ಣಂ ಗದ್ದೆ ಕಮ್ಮ ।೧೨೦।
55 ಹರಕುಂದರ ತೀಕಿಮಯ್ಯನ ಮಗಂ ಕಾಳದಾಸಿಯುಮವರಳಿಯಂ ಸಂಕಣ್ಣನುಂ ಹಾಂವಸಿಗೆಯಪ್ಪಣ್ಣ-
ನುಂ ಗದ್ದೆ ಗುಣಿಗನಮತ್ತರ್ ೨. ಮಾಬಲಯ್ಯನ ತೀಕಣ್ಣ-
56 ನುನ್ತಮ್ಮಂ ಕಾಳಯಣ್ಣನುಮ್ಮಾರಯ್ಯನುಂ ಗದ್ದೆಕಮ್ಮ ।೧೫೦। ಹುಳಿಯಕಬ್ಬೆಯ ಸೋವಣ್ಣನುಂ
ದೇಚಿಕಬ್ಬೆಯೀಶ್ವರಯ್ಯನುಂ ಸಾಂದೆರ ಕೇತಣ್ಣನುಮವರ ಹೆ-
57 ಬ್ಬಣ್ಣನುಮವರ ಸೂರಯ್ಯನುಮೊಂದೆ ಪಸುಗೆ ಗದ್ದೆ ಕಮ್ಮ ।೩೦೦। ಎಹೆಕಜ್ಜಂ ಗದ್ದೆ ಕಮ್ಮ ।೩೦೦।
ಮಣಿಗಾಱ ರೇಚಿಸೆಟ್ಟಿಯುಂ ಕಳ್ಳಿಸೆಟ್ಟಿಯುಂ ಗದ್ದೆಕಮ್ಮ ।೩೦೦। ಅನ್ತು

58 ಗಟ್ಟೆ ಗುಣಿಗನ ಮತ್ತರ್ ೪| ಕಮ್ಮ |೧೩೦| ಬಿಡಿನಾಳಯ್ಯನ ಚಾವಣ್ಣಂ ದೇವರ ಹೂದೋಟಕ್ಕೆ ಬಾ-
ದುಂಬೆಯ ಹಳ್ಳದಿಂ ಮೂಡಲು ಮಳವದ ಮುಕ್ಕಿ ಗುಣಿಗನ ಮತ್ತರ್ ೧|

59 ದುದ್ದಿಮಯ್ಯನ ಮಗಂ ಪದ್ಮನಾಭನೊತ್ತಿಯ ಹತ್ತಿರಲೀಶ್ವರಯ್ಯನ ಮಕ್ಕೆಯಿಂ ಪಡವಲು ಕೊಟ್ಟ
ತುಳುಕವಟ್ಟನ ಮಕ್ಕೆ ಕಮ್ಮ |೪೫| ಇನ್ತೀ ಬಿಟ್ಟ ಕೆಯ್ಯುಮ್ಮಂ ಗ-

60 ದ್ದೆಯುಮಂ ಸರ್ವ್ವಬಾಧಾಪರಿಹಾರಮಾನಿನ್ನೂರ್ವ್ವರುಂ ಸ್ವಧರ್ಮ್ಮದಿಂ ಪ್ರತಿಪಾಳಿಸುವರು ||ಕಂದ|| ಗವ-
ತೆಗಳೆಯ್ನೂರ್ವ್ವರುಮಭಿನವಸೋಮೇಶಂಗೆ ಮಿಂಪಿನ-

61 ಲು ಪಣವೊಂದಂ ಧ್ರುವಮಾಗೆ ಪಸುಂಬೆಗೆ ಹಾಗವನೆೞಕದೆ ಕರ್ತ್ತಯಲ್ಲಿ ಬೇಳೆಯನಿತ್ತರ್ || ಮುದದಿಂ-
ದಯ್ನೂರ್ವ್ವರ್ಪ್ಪದು ಮೊದಲರ್ತ್ಥಮನಿತ್ತರೊಲ್ದು ಸೋ-

62 ಮೇಶಂಗಿನ್ನಿದನಾವನೊರ್ವ್ವನಳಿದವನದಯನ್ನರಕಕ್ಕೆ ಪೋಗಿ ಸುಖದಿಂದಿರ್ಕ್ಕ|| ಅಂಗಡಿಯೊಳು ಸೊಂಟಿಗೆ
ಭತ್ತಂ ಗಾಣದೊಳೊಂದು ಸೊಟಿಗೆಣ್ಣೆಯನಿತ್ತ-

63 ಗ್ಗಂಗಾತರಂಗಭಂಗಾಲಿಂಗಿತಜೂಟಂಗೆ ಪರದರುನ್ತೆಲ್ಲಿಗರು || ಮತ್ತಂ ಸೋಮೇಶಂಗೆ ಸುವೃತ್ತಪ್ಪ-
ಜ್ಜಂಕದೊಡೆಯಲಿರ್ವ್ವಮ್ಮ್ಮದದಿಂದಿತ್ತದ್ದವಸದ ಸುಂಕಮನತ್ತಳಗಂ ಸೋಂವಿಮುಗ್ಗ-

64 ನುಂ ಬೀರಣನು || ಪೆಸೞುಪ್ಪು ಕಡಲೆ ಗೋಧುವೆ ಮಿನುಪೆಳ್ಳೆಂಬಿವೞ ಪೇೞು ಮೊವತ್ತಕ್ಕೊನ್ದೆಸವ
ದವಸಕ್ಕಮಾರ್ಪ್ಪನ್ದೊಸದಿರ್ಪ್ಪತ್ತರ್ಕ್ಕೆ ಕೊಟ್ಟರೊನ್ದಮ್ಮುದದಿ|| ಪತ್ತಿಯ ಮಳವೆಗಳೊ-

65 ಳು ನಾಲ್ವತ್ತಕ್ಕೊನ್ದನ್ತೆ ಮುರದ ತೆಪ್ಪಕ್ಕಂ ನಾಲ್ವತ್ತಕ್ಕೊನ್ದಂ ಕೊಟ್ಟರ್ಮ್ಮತ್ತಿದನಾರಳಿದರಳಿ-
ದರಂ ಯಮನಟಿಗು|| ಕುೞುವೆತ್ತಿಗ್ರಾಮದಿನಿಂ ಪೊೞಮಡುತಂ ಪುಗುತುಮಿರ್ಪ್ಪ ಧಾ-

66 ನ್ಯಕ್ಕೆಲ್ಲಾ ನೆಟೆ ಪತ್ತಿ ತೆಪ್ಪಮಿನಿತಕ್ಕೞದಿತ್ತಸ್ಸಂಕವಮಂ ಕರಂ ಸಾದರದಿ || ಅಡಕೆಯೆಲೆವೇಟೊಳತ್ತ
ವ್ವೆಡಗೆ ನಾಲ್ವತ್ತು ಪೇಟೊಳೊನ್ದಮ್ಮುದದಿಂ ಕಿಡಿಪೆನಿದನೆಂಬ ಪಾತಕನದೆವು-

67 ದು ಗಡ ವೀಚಿಯೊಳು ಕುಟುಂಬಿಯನಿಕ್ಕು ಮತ್ತನ್ತಳಾೞಂ ಚಂದಿಯಣ್ಣನಿಂ ಪಿರಿಯನುದಯಣ್ಣಂ
ಗದ್ದೆ ಕಮ್ಮ ||೧೨೫|| ಕರಿಯದೇಚಿಮಯ್ಯನ ಮಗಂ ವಾಸಿಯಣ್ಣಂ ಗದ್ದೆ ಕ-

68 ಮ್ಮ ೧೦೦| ಅವರಣ್ಣಂ ವೈಜಣ್ಣಂ ಗದ್ದೆ ಕಮ್ಮ |೧೫೦|ಸುಂಕವೆಗ್ಗಡೆ ಚಟಿಮಯ್ಯನ ಮಗಂ ಬಮ್ಮ-
ದೇವಯ್ಯನಾಯ್ಯಯ್ಯನ ಪುತ್ರಂ ಹರದದೊರೆಡೆಯಂ ಚಾವುಂಡ-

69 ರಾಯಂ ಹರದದ ದತ್ತಿ ಗಟ್ಟದ ಕೆಳಗೆ ಗಟ್ಟೆ ಗುಣಿಗನ ಮತ್ತರು |೧|| ಅದೞ ಸೀಮಾಸಂಬನ್ಧಮೆನ್ತೆ-
ನ್ದೊಡೆ ಮೂಡಲು ದಿಬ್ಬ ಬಡಗಲು ಪಳ್ಳ ಪಡುವಲು ಬಾಯಿಕಲು ತೆಂಕ-

70 ಲು ಭಂಡಿವಟ್ಟೆ || ಸ್ವಸ್ತಿ ಶ್ರೀಪಾದದ ಮಾರಸಿಂಗಯನಾಯಕರ ಮಗಂ ನಾಗದೇವ ತನ್ನಂಶದ ಎರಡು
ಹತ್ತಿಯೆರೆಯ ಬಳಿಯ ತೋಂಟ ವಸುಗೆಯ ಗದ್ದೆ ಕಮ್ಮ ೨೫ ಧಾರಾಪೂರ್ವ್ವಕಂ ಮಾಡಿ ದೇ-

71 ವರ ನಿವೇದ್ಯಕ್ಕೆ ಕೊಟ್ಟು ಗಂಧ ಧೂಪಕ್ಕೆ ೧ ಗದ್ಯಾಣ ಪೊನ್ನಂ ಬಿಟ್ಟನದೞ ಕಳಾನ್ತರದಿಂ ನಡೆಯಿಸು-
ವರ್ ..

72 ಇನ್ತೀ ಧರ್ಮ್ಮಮಂ ಸ್ವಧರ್ಮ್ಮದಿಂ ಪ್ರತಿಪಾಳಿಸಿದವರ್ವ್ವಾರಣಾಸಿ ಕುರುಕ್ಷೇತ್ರಂ ಮೊದಲಾಗಿರ್ಪ್ಪ
ಪುಣ್ಯತೀರ್ತ್ಥಂಗಳೊಳು ಸಾಸಿರ ಕವಿಲೆಯ . . . . . . . . ಪಂಚರತ್ನದಿಂ

73 ಖಚಿಯಿಸಿ ಸಾಸಿರ್ವ್ವರ್ವ್ವೇದಪಾರಗರ್ಗ್ಗೆ ಸೂರ್ಯ್ಯಗ್ರಹಣದಂದು ಕೊಟ್ಟ ಪುಣ್ಯಮ . ರಪ್ಪರೀ
ಧರ್ಮ್ಮಮ . . . . . . . . ವರಾ ಪುಣ್ಯತೀ-

74 ರ್ತ್ಥಂಗಳೊಳು ಸಾಸಿರ ಕವಿಲೆಯುಮಂ ಸಾ ಸಿರ್ವ್ವರ್ವ್ವೇದಪಾರಗರುಮಂ ಸೂರ್ಯ್ಯಗ್ರಹಣದಂದಳಿದ
. . . . . . . . . . ಷಮಿತ್ಯಾಹುರ್ದ್ವೇದ-

75 ಸ್ವಂ ವಿಷಮುಚ್ಯತೇ | ವಿಷಮೇಕಾಕಿನಂ ಹನ್ತಿ ದೇವಸ್ವಂ ಪುತ್ರಪೌತ್ರಿಕಂ| ದಾತಾರಸ್ಸುಲಭಾ ಲೋಕೇ
ರಕ್ಷಿತಾರಸ್ತು ದುರ್ಲ್ಲಭಾಃ . . . . . . ಸಹಸ್ರಾಣಾಂ ರಕ್ಷಿತೃ-

76 ಕೋ ವಿಶಿಷ್ಯತೇ|| ಸ್ವದತ್ತಾಂ ಪರದತ್ತಾಂ ವಾ ಯೋ ಹರೇತ ವಸುಂಧರಾಂ ಷಷ್ಟಿರ್ವ್ವರ್ಷಸಹಸ್ರಾಣಿ
ವಿಷ್ಠಾಯಾಂ ಜಾಯತೇ ಕ್ರಿಮಿಃ || . . . ಬಹುಭಿರ್ವ್ವಸುಧಾ ಭುಕ್ತಾ ರಾಜಭಿಃ

77 ಸಗರಾದಿಭಿಃ| ಯಸ್ಯ ಯಸ್ಯ ಯದಾ ಭೂಮಿಸ್ತಸ್ಯ ತಸ್ಯ ತದಾ ಫಳಮ್|| ಸಾಮಾನ್ಯೋಯಂ ಧರ್ಮ್ಮ-
ಸೇತುರ್ನ್ನೃಪಾಣಾಂ ಕಾಲೇ ಕಾಲೇ ಪಾಲನೀಯೋ ಭವದ್ಭಿಃ

78 ಸರ್ವ್ವಾನೇತಾನ್ಭಾವಿನಃ ಪಾರ್ತ್ಥಿವೇಂದ್ರಾನ್ಭೂಯೋ ಭೂಯೋ ಯಾಚತೇ ರಾಮಭದ್ರಃ|| ವಿದ್ಯಾವಧೂ..
ಶ್ರವಣಭಾಸುರಕರ್ಣ್ಣಪೂರಃ ಶ್ರೀಕಾಳಿದಾಸವಿಬುಧಾ-

79 ಪತೇಸ್ತನೂಜಃ | ಸೋಮೇಶಶಾಸನವಚೋರಚನಾಂ ವಿಧಾಯ ಶ್ರೀಕಣ್ಠಸೂರಿರಲಿಖದ್ವಿಬುಧೈರ್ವ್ವಿಚಾ-
ರ್ಯ್ಯಮ್ || ಗುಣಪಾ . . . ರ್ಯ್ಯಪ್ರಣೀತಶಾ-

80 ಸ್ತೋತ್ರೀಕ್ತ್ತಯಿಂದೆ ಕಲುವೆಸನಂ ಲಕ್ಷಣಯುಕ್ತ್ತಮಾಗಿರಲು ಧಾರಣಿಯೊಳು ಗುಲುಗೋಜನಜಿವನೆಂದೆಳೆ ಪ್ರೊಗಳ್ದ್ಗಂ॥ ಬರೆ . . . . . . . ಸುರರಾಜ ತಿರೀಟ

81 ಘಟಿತಪದಶಾಸನಮಂ ಸ್ಥಿರಮಾಗಿರೆ ಮುದದಿಂ ಕಂಡರಿಸಿದನಾಚಂದ್ರತಾರಕಂ ಕಾಳೋಜಂ। ಶುಭಂ ಭೂಯಾದಭಿನವಸೋಮೇಶ್ವರಭಕ್ತಾನಾಂ[॥*]

## No. 166.

(*A.R. No.* 45 *of* 1904.)

ON ANOTHER SLAB BUILT INTO THE PLATFORM IN FRONT OF THE KUMARASVAMI TEMPLE AT KUDATINI, BELLARY TALUK, SAME DISTRICT.

This is dated **Chālukya-Vikrama year 24, Pramāthin, Śrāvaṇa, śu. 5, Ādivāra** corresponding to **A.D. 1099 July 24, Sunday** on which day the 4th *tithi* was current for about 2 hours in the morning. It refers itself to the reign of the Chāḷukya king **Tribhuvanamalladēva** and states that what was formerly a *paramēśvara-datti* was transferred to Bhagavatīdēvī of **Koṭṭittoṇe**, in the presence of **Viśvarūpa-Brahmachārin**, the five *Vargas* and Sajāvi-Chakrapāṇi.

1 ಸ್ವಸ್ತಿ [॥*]ಶ್ರೀಜಯಾಭ್ಯುದಯಶ್ಚ ಜಯತ್ಯಾ-
2 ವಿಷ್ಕೃತಂ ವಿಷ್ಣೋರ್ವಾರಾಹಂ ಕ್ಷೋಭಿತಾರ್ಣ್ಣವಂ । ದಕ್ಷಿಣೋ-
3 ನ್ನತದಂಷ್ಟ್ರಾಗ್ರವಿಶ್ರಾನ್ತಭುವನಂ ವಪುಃ॥
4 ಸ್ವಸ್ತಿ ಸಮಸ್ತಭುವನಾಶ್ರಯಂ ಶ್ರೀಪ್ರಿಥ್ವೀವಲ್ಲ-
5 ಭ ಮಹಾರಾಜಾಧಿರಾಜ ಪರಮೇಶ್ವರಂ ಪರಮ-
6 ಭಟ್ಟಾರಕಂ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾ-
7 ಭರಣಂ ಶ್ರೀಮತ್ತ್ರಿಭುವನಮಲ್ಲದೇವರ ವಿಜಯ-
8 ರಾಜ್ಯಮುತ್ತರೋತ್ತರಾಭಿವೃದ್ಧಿಪ್ರವರ್ಧಮಾನಮಾಚಂ-
9 ದ್ರಾರ್ಕ್ಕತಾರಂ ಸಲುತ್ತಂ ರಾಜಧಾನಿ ಕಲ್ಯಾಣಪುರದ ನೆಲೆ-
10 ವೀಡಿನೊಳ್ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ
11 ಸ್ವಸ್ತಿ ಸಮಧಿಗತಪಂಚಮಹಾಶಬ್ದ ಬ್ರತಜಪನಿಯಮಹೋ-
12 ಮಸಂಯುಕ್ತ ಶ್ರೀಸ್ವಾಮಿಕಾರ್ತ್ತಿಕೇಯದೇವತಪೋವನಾಧಿಪ-
13 ತಿಗಳಪ್ಪ ಶ್ರೀಮದ್ವಣ್ಯಾಸನೀ ವಿಶ್ವರೂಪಬ್ರಹ್ಮಚಾರಿಗಳುಂ
14 ಸ್ಥಾನದಯ್ದುವರ್ಗ್ಗಮುಂ ಸಜಾವಿ ಚಕ್ರಪಾಣಿಯುಮಿರ್ದ್ದ
15 ಶ್ರೀಮಚ್ಚಾಳುಕ್ಯವಿಕ್ರಮವರ್ಷದ ೨೪ ನೆಯ ಪ್ರಮಾದಿಸಂವತ್ಸರ-
16 ದ ಶ್ರಾವಣ ಸುದ್ಧ ೫ ಆದಿವಾರದಂದು ಶ್ರೀಶ್ವಾಮಿದೇವರ
17 ಪಟ್ಟಣಂ ಕೊಟ್ಟಿತ್ತೊಣೆಯ ಮಳಿಗೆಯ ಭಗವತೀದೇವಿಯ-
18 ರ್ಗ್ಗೆ ಮುನ್ನ ಪರಮೇಶ್ವರದತ್ತಿಯಾಗಿ ಪಡದ ವ್ರಿತ್ತಿ ಕೊಳ-
19 ದಪೊಲಂ ಹಾಳೆಹನ್ನಸಿಂ ಬಡಗ ತೋರಣಗೆಯಿ ನವಿಲ-
20 ಕೋಲಲು ಮತ್ತರು ೨೦ ಕೋಳೂರ ಬಟ್ಟೆಯಿಂ ಬಡಗ ಓ-
21 ಜಿಷ್ಟಪನ್ನಸು ಮತ್ತ ೫ ಕೊಳ್ಳಲ ಬಟ್ಟೆಯಿಂ ಬಡಗಗ-
22 ಡೆಯ ಪೊಲದ ಮತ್ತರು ೧೧ ಆ ಪೊಲಂ ಕೆಸವರಗೆ-
23 ಯ್ಯಿಂ ಪಡುವ ಮತ್ತರು ೧೯ ಕಮ್ಮರದ ಪರವೆರಿಯಿಂ
24 ಪಡುವ ಕೋಳೂರ ಬಟ್ಟೆಯಿಂ ತೆಂಕ ಮತ್ತರು ೧೮ ಚಂಪ-
25 ನ ಕೆಱೆಯಿಂ ಬಡಗ ಕೋಳೂರ ಬಟ್ಟೆಯಿಂ ಪ-
26 ಡುವ ಮತ್ತರು ೩೦ ಜಱಗಪೊಲದಿಂ ತೆಂಕ ಕರು-
27 . ನ ಮೊಳದ ಇಬ್ಬಡಗದ ಹಾಳ ಮತ್ತ-
28 ರು ೧೧ ಅನ್ತುಮತ್ತರು ನೂಱಪದಿನಾಲ್ಕು
29 ದೊರವಡಿಯ ಬಟ್ಟೆಯಿಂ ತೆಂಕ ತೋಂಟದ ದೊಡೆಯ ಕ
30 ಮ್ಮ ನಾನೂಱಯ್ವತ್ತು ಗಂಜಿಗೆಱೆಯಿಂ ಬಡಗಣ ತೋಂ-

31 . . ಕಮ್ಮಱ ಹನ್ನಸು ಮ ೧೨ ಬಸುರಿಯ

32 . ಯಲು ಮೂಡವಾಗಿಲ ನೆಲಸಣ ಕ್ಯೆ ೫

33 ಜಱಗವ್ರೊಲದ ಕೆಯಿ ಮ ೨೦ ಗಾಣ ಒ ೧ [||*]

## No. 167.

(*A.R. No.* 673 *of* 1922.)

ON A BROKEN SLAB LYING IN THE SAMBHULINGESVARA TEMPLE AT SIRUGUPPA, SAME TALUK AND DISTRICT.

This is damaged and dated **Chālukya-Vikrama year 27, Chitrabhānu, Pushya, śu. 6, Budhavāra**, corresponding to **A.D. 1102 December 17, Wednesday.** It refers itself to the reign of the Chāḷukya king **Tribhuvanamalladēva,** whose feudatory **Tribhuvanamalla-Pāṇḍyarasa** was ruling **Noḷambavāḍi thirtytwo-thousand. Chokkarāya, Bīvarasa, Lōkarasa** and others are said to have made a grant of some land for the service of some god (name lost).

1 ಸ್ವಸ್ತಿ [||*] ಸಮಸ್ತಭುವನಾಶ್ರಯ . . . . . . . .

2 ಹಾರಾಜಾಧಿರಾಜ ಪರಮೇ[ಶ್ವ]ರ ಪರಮಭಟ್ಟಾರಕ . .

3 ಶ್ರಯಕುಳತಿಳಕ [ಚಾ]ಳುಕ್ಯಾಭರಣ ಶ್ರೀ-

4 ಮತ್ತ್ರಿಭುವನಮಲ್ಲದೇವರ ವಿಜಯರಾಜ್ಯ[ಮು]ತ್ತರೋ[ತ್ತ]-

5 ರಾಭಿವೃದ್ಧಿಪ್ರವರ್ದ್ಧಮಾನಮಾಚಂದ್ರಾರ್ಕತಾರಂಬರಂ ಸಲುತ್ತ

6 ಬಲ್ಲಕುಂದೆಯ ನೆಲೆವೀಡಿನೊಳ್ ರಾಜ್ಯಂಗೆಯ್ಯುತ್ತಮಿರೆ . . . . .

7 ಪದ್ಮೋಪಜೀವಿ ಸಮಧಿಗತಪಂಚಮಹಾಶಬ್ದ ಮಹಾಮಣ್ಡಳೇಶ್ವರ [ಕಾಂ]-

8 ಚೀಪುರವರೇಶ್ವರಂ ಯದುವಂಶಾ[ಬರ]ದ್ಯುಮಣಿ ಸಮ್ಯ

9 . ಚೂಡಾಮಣಿ ನಿಜಕುಳಕಮಳಮಾರ್ತ್ತಣ್ಡ . . .

10 ದಿಗಣ್ಡ ರಾಜಿಗಚೋಳಮನೋಭಂಗಂ ಶ್ರೀಮತ್ತ್ರಿಭವನಮಲ್ಲ

11 . . ಪಾದಾಬ್ಜಭೃಂಗಂ ಶ್ರೀಮನ್ಮಹಾಮಣ್ಡಳೇಶ್ವರಂ ತ್ರಿಭುವನಮಲ್ಲಪಾಂ-

12 [ಡ್ಯರ]ಸರು ಕುತ್ತುಂಬಿತ್ತಿಭತ್ತಗ್ರಾಮ . . . . . .

13 ವಾಡಿ ಮೂವತಿಚ್ಛಾಸಿರಮುಮಂ . . . . . . . .

14 ದುಷ್ಟನಿಗ್ರಹಸಿಷ್ಟಪ್ರತಿಪಾಳನದಿಂ ರಾಜ್ಯಂಗೆಯ್ಯುತ್ತಿರೆ

15 . . . . . . . ನಾಯಕಂ ಚೊಕ್ಕರಾಯಂ ಚಾಳುಕ್ಯವಿಕ್ರಮ . . .

16 ೨೭ ನೆಯ ಚಿತ್ರಭಾನುಸಂವತ್ಸರದ ಪುಷ್ಯ ಸುದ್ಧ ೬ ಬುಧವಾರ . . .

17 ಯಣಸಂಕ್ರಾಂತಿಯ ಪರ್ವ್ವನಿಮಿತ್ತದಿಂ ಬಲ್ಲಕುಂದೆ . . .

18 . . . . . . . . . . ರೊಳಗಣ ಭತ್ತಗ್ರಾಮ . . .

19 ಪ್ಪೆಯ ಸ್ವಯಂಭುದೇವ . . . . . . . ಧೂಪ . . .

20 . . . ನಿವೇದ್ಯಕ್ಕಂ ದೇವಾಲ್ಯದ ಖಂಡಸ್ಫುಟಿತಜೀರ್ಣೋದ್ಧಾರಕ್ಕಂ . .

21 . . . . ಸಿರಿಪುರದ . . . . . . . . ೦ ಕೆಯ . .

22 ಕೋಡಿಯಲು ಬಿಟ್ಟ ಗದ್ದೆ ಮತ್ತರೊಂದು . . . . ವದೆ

23 . . ಬಿಟ್ಟ ವೊಗೆ ಮತ್ತರೊಂದು ಬಲ್ಲಕುಂದೆಯ . . . .

24 ಱ ಮನ್ನೆಯಂ ಬೀವರಸನುಂ . . . .

25 . . . . ಲೋಕರಸನು ತಕ್ಕೆಕಲ್ಲ ಚೊಕ್ಕರಸ

26 . . . . . ಲೆಯ ಜಗ್ಗರಸನು ಸಮಸ್ತಪ್ರಜೆ[ಗಾ]-

27 ವುಂಡಗಳುಮಿಱ್ದು ಬಲ್ಲಕುಂದೆ ಮೂ-

28 [ನೂ]ಱಱಲು ಮೂರಲೊಂದು ಪಣಮಂ

29 ಕೊಟ್ಟರಿನ್ತೀ ಧರ್ಮ್ಮವನಾವನೋರ್ವ್ವಂ ಪ್ರತಿಪಾ-

30 ಳಿಸಿದಂ ಕುರುಕ್ಷೇತ್ರ ವಾರಣಾಸಿ ಪ್ರಯಾ-

31 ಗೆಯಲು ಸಾಸಿರ ಕವಿಲೆಯಂ ಸ-

32 ಹಸ್ರ ಬ್ರಾಹ್ಮರ್ಗ್ಗೆ ದಾನಂಗೆಯ್ದ

33 ಫಳಮಕ್ಕು ||

## No. 168.

(*A. R. No.* 96 *of* 1904.)

ON A SLAB SET UP TO THE SOUTH OF THE KALLESVARA TEMPLE AT BAGALI, HARAPANAHALLI TALUK, SAME DISTRICT.

This is dated **Chālukya-Vikrama year 28, Subhānu, Pushya, ba. 10, Śukravāra, Uttarāyaṇa-saṅkrānti, Vyatīpāta** corresponding to **A.D. 1103 December 25 Friday.** It refers itself to the reign of the Chāḷukya king **Tribhuvanamalladēva** whose *Daṇḍa-nāyaka*, **Muddarasa,** is said to have made a gift of the toll-revenue on two loads of betle leaves per year for the service of the god Kalidēva, after washing the feet of **Śivaśakti-Paṇḍita,** in the presence of the *Mahājanas* of **Bāḷguḷi**. Out of the 12 *paṇas* thus granted 2 *paṇas* were given to the reader of the *Purāṇas*.

1 ಸ್ವಸ್ತಿ [।।*]ಸಮಸ್ತಭುವನಾಶ್ರಯಂ ಶ್ರೀಪೃಥ್ವೀವಲ್ಲಭ ಮಹಾರಾಜಾಧಿರಾಜ
2 ಪರಮೇಶ್ವರ ಪರಮಭಟ್ಟಾರಕಂ ಸತ್ಯಾಶ್ರಯಕುಳತಿಳಕಂ
3 ಚಾಳುಕ್ಯಾಭರಣಂ ಶ್ರೀಮತ್ತ್ರಿಭುವನಮಲ್ಲದೇವರ ವಿಜಯರಾ-
4 ಜ್ಯಮುತ್ತರಾಭಿಪ್ರವರ್ದ್ಧಮಾನಮಾಚಂದ್ರಾರ್ಕ್ಕತಾರಂಬ-
5 ರಂ ಸಲುತ್ತಮಿರೆ ತತ್ಪಾದಪದ್ಮೋಪಜೀವಿ ॥ ಸ್ವಸ್ತಿ ಸಮಸ್ತರಾಜ್ಯ-
6 ಭರನಿರೂಪಿತಮಹಾಮಾತ್ಯಪದವೀವಿರಾಜಮಾ-
7 ನಮಾನೋನ್ನತಪ್ರಭುಮಂತ್ರೋತ್ಸಾಹಶಕ್ತಿತ್ರಯಸಂಪನ್ನಂ ನುಡಿದು
8 ಮತ್ತನ್ನನಾಶ್ರಿತಜನಕಲ್ಪವೃಕ್ಷಂ ಪತಿಕಾರ್ಯ್ಯ-
9 ದಕ್ಷ(ಂ)ನ್ನಿಯೋಗಯೋಗನ್ಧರಾಯಣಂ ನೀತಿಪರಾಯಣಂ
10 ಗೋತ್ರಪವಿತ್ರಂ ಸುಜನಜನಮಿತ್ರಂ ನಾಮಾದಿಸಮಸ್ತಪ್ರ-
11 ಶಸ್ತಿಸಹಿತಂ ಶ್ರೀಮದಚ್ಚುಪನ್ನಾಯದದಿಷ್ಠಾಯಕಂ ದಣ್ಡ-
12 ನಾಯಕಂ ಮುದ್ದರಸರು ಸ್ವಸ್ತಿ ಶ್ರೀ-
13 ಮಚ್ಚಾಳುಕ್ಯವಿಕ್ರಮವರಿಷ ೨೮ ನೆಯ ಸುಭಾನು-
14 ಸಂವತ್ಸರದ ಪುಷ್ಯ ಬಹುಳ ೧೦ ಶುಕ್ರವಾರದಂದುತ್ತ-
15 ರಾಯಣಸಂಕ್ರಾ(ಂ)ನ್ತಿ ವ್ಯತೀಪಾತಂ ಕೂಡಲು @ ಸ್ವಸ್ತಿ ಯಮ-
16 ನಿಯಮಸ್ವಾಧ್ಯಾಯಧ್ಯಾನಧಾರಣಮೋನಾನು-
17 ಷ್ಠಾಣಜಪಸಮಾಧಿಶೀಳಗುಣಸಂಪನ್ನರಪ್ಪ ಶ್ರೀಮತು
18 ಹರಿಶ್ಚಂದ್ರದತ್ತಿಯಗ್ರಹಾರಂ ಬಾಳ್ಗುಳಿಯೊ-
19 ರೊಡೆಯಪ್ರಮುಖಮಹಾಜನಮಯ್ವದಿಂಬ-
20 ರ ಸ(ಂ)ನ್ನಿಧಾನದೊಳ್ ಸ್ವಸ್ತಿ ಯಮನಿಯಮಾಸನಾನುಷ್ಠಾ-
21 ಣಪರಾಯಣಜಪಸಮಾಧಿಸಕಳಾಗಮಶಾಸ್ತ್ರಪ-
22 ರಮತತ್ವಜ್ಞಾನಸಕಳಗುಣಸಂಪನ್ನರಪ್ಪ ಶ್ರೀಮತ್ಶಿವ-
23 ಶಕ್ತಿಪಣ್ಡಿತರ ಕಾಲಂ ಕರ್ಚ್ಚಿ ಧಾರಾಪೂರ್ಬ್ಬ-
24 ಕಂ ಮಾಡಿ ಶ್ರೀಸ್ವಯಂಭುಕಲಿದೇವಸ್ವಾಮಿದೇವರ
25 ನಿವೇದ್ಯಕ್ಕಂ ನಂದಾದೀವಿಗೆಗಂ ತಿಂಗಳಿಂಗೆ ಯೆರಡೆಲೆ-
26 ಯ ಪೇಱಿನ ಸುಂಕಂ ಪನ್ನೆರಡು ಪಣವಂ ಬಿಟ್ಟನೀ ಧರ್ಮ್ಮಮನ-
27 ಯ್ವದಿಂಬರುಂ ಪ್ರತಿಪಾಳಿಸುವರ್ @ ಮತ್ತಮಾ ಪುಣ್ಯತಿ-
28 ಥಿಯೊಳ್ ಅರಸಿಯಕೆಱೆಯ ನಾಕರಸನುಂ ಮದ್ದೂರ ಬಾದಿಸೆಟ್ಟಿ-
29 ಯುಂ ಹಾನುಂಗಲ್ಲ ಕೊಸಗಿಸೆಟ್ಟಿಯುಂ ಹಮ್ಮಕ್ಕ ಬಮ್ಮಿಸೆಟ್ಟಿಯುಂ ತಳ-
30 ದ ಗಾತ್ರದ ಸೆಟ್ಟಿಗಳುಮಿಪ್ದಯ್ವದಿಂಬರ ಸನ್ನಿಧಾನದೊಳ್ ಶ್ರೀಸ್ವ-
31 ಯಂಭುಕಲಿದೇವಸ್ವಾಮಿಯಗ್ರಾಸನದ ಬ್ರಾಹ್ಮ-
32 ಣರ ಸತ್ರಕ್ಕೆ ಯೆಲೆಯ ಪೇಱಿಂಗೆಯೊಂದು ವೀಸಂ ತಲೆವೊಱೆಗೆಯ-
33 ರೆವೀಸಮಂ ಬಿಟ್ಟರೀ ಧರ್ಮ್ಮಮನಯ್ವದಿಂಬರುಂ ಪ್ರತಿಪಾಳಿಸುವರ್
34 @ ಸ್ವದತ್ತಂ ಪರದತ್ತಂ ವಾ ಯೋ ಹರೇತಿ ವಸುಂಧರಾಂ ಷಷ್ಟಿರ್ವ್ವರ್ಷಸ-

35 ಹಶ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿ[ಃ*] ॥ ಸಾಮಾನ್ಯೋ-
36 ಯಂ ಧರ್ಮ್ಮಸೇತು(ಂ)ರ್ನ್ನೃಪಾಣಾಂ ಕಾಲೇ ಕಾಲೇ ಪಾಲನೀಯೋ ಭ-
37 ವದ್ಭಿಃ । ಸರ್ವ್ವಾನೇತಾಂ ಭಾಗಿನಃ ಪಾರ್ತ್ಥಿವೇಂದ್ರಾ[ನ್*] ಭೂಯೋ ಭೂ-
38 ಯೋ ಯಾಚತೇ ರಾಮಚಂದ್ರಃ ॥ ಆ ಪನ್ನೆರಡು ಪಣ-
39 ವಿನೊಳಗೆ ದೇವರ ಪೂಜಾರಿಗೆ ಪಣ ೨ ಮತ್ತ ಪುರಾಣಕ್ಕೆ ಬಿಟ್ಟ ಪ ೧
40 ಪೂವಿನ ತೋಟಕ್ಕೆ ಪಣ ೨ ಅನ್ತು ಗದ್ಯಾ ೧ ಪ ೪ ◎

## No. 169.

(*A.R. No.* 214 *of* 1918.)

ON A SLAB SET UP IN THE MALLIKARJUNA TEMPLE AT KURUVATTI, SAME TALUK AND DISTRICT.

This is dated **Chālukya-Vikrama year 29, Tāraṇa, Vaiśākha, śu. 3, Ādityavāra.** The details given correspond to **A.D. 1104 March 30 Wednesday,** not Sunday, as stated. It refers itself to the reign of the Chāḷukya king **Tribhuvanamalladēva** and states that the *Mahājanas* of the *agrahāra* of **Gaṇḍarādityanahoḷal** having complained to the emperor that the *Manneya* **Boppaya,** who had captured Hoḷalu, was plundering the village and killing even the Brāhmans, the emperor sent for him, chastised him and took from him an undertaking that he and his descendants would not have a claim to the *Manneya* of Hoḷalu. Boppaya did so in the presence of the people of the **thirtytwo-thousand** province containing **Beṇṇevūru twelve, Nīrugunda,** the two **Haḍaṅgiles, Māṅgōḷa, Bidirahaḷḷi, Hahanūru, Honnavaḷḷi, Kuṟuvatti** and **Bāḷguḷi**; and after drinking water at the temple of Tripurāntakadēva, he set up this stone.

1 ಜಯತ್ಯಾವಿಷ್ಕೃತಂ ವಿಷ್ಣೋರ್ವ್ವಾರಾಹಂ ಕ್ಷೋಭಿತಾರ್ಣ್ಣವಂ ।
2 ದಕ್ಷಿಣೋನ್ನತದಂಷ್ಟ್ರಾಗ್ರವಿಶ್ರಾನ್ತಭುವನಂ ವಪುಃ ॥
3 ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ । ತ್ರೈ-
4 ಳೋಕ್ಯನಗರಾರಂಭಮೂಳಸ್ತಂಭಾಯ ಶಂಭವೇ ॥
5 ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀಪೃಥ್ವೀವಲ್ಲಭಂ
6 ಮಹಾರಾಜಾಧಿರಾಜಂ ಪರಮೇಶ್ವರಂ ಪರಮಭಟ್ಟಾರ-
7 ಕಂ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ
8 ಶ್ರೀಮತ್ತ್ರಿಭುವನಮಲ್ಲದೇವರ ವಿಜಯರಾಜ್ಯಮು-
9 ತ್ತರೋತ್ತರಾಭಿವೃದ್ಧಿಪ್ರವರ್ದ್ಧಮಾನಮಾಚಂದ್ರಾರ್ಕ್ಕತಾರಂ-
10 ಬರಂ ಸಲುತ್ತಂ ರಾಜಧಾನಿ ಕಲ್ಯಾಣಪುರದ ನೆಲೆವೀಡಿನೊ-
11 ಳು ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ
12 ಚಾಳುಕ್ಯವಿಕ್ರಮವರ್ಷದ ೨೯ ನೆಯ ತಾರಣಸಂ-
13 ವತ್ಸರದ ವೈಶಾಖ ಶುದ್ಧ ತದಿಗೆ ಆದಿತ್ಯವಾರದಂದು ಅ-
14 ಗ್ರಹಾರಂ ಗಂಡರಾದಿತ್ಯನಹೊಳಲ ಮಹಾಜನಂಗಳು
15 ಮನೆಯಂ ಬೊಪ್ಪಯಂ ಹೊಳಲನಿಱಿದು ಸರ್ವಸ್ವಹ-
16 ರಣಂ ಮಾಡಿ ಸೂರೆಗೊಂಡುದುಮಂ ಬ್ರಾಹ್ಮಣರಂ
17 ಕೊನ್ದುದುಮಂ ಚಕ್ರವರ್ತ್ತಿಗೆ ಬಿನ್ನಪಂಗೆಯ್ಯಲು
18 ಕೇಳ್ದವಧಾರಿಸಿ ಬೊಪ್ಪನಂ ದಂಡಿಸಿ ಸಮಸ್ತ ಪ್ರ-
19 ಧಾನರ ಸಂನಿಧಾನದಲು ಆ ಅಗ್ರಹಾರಕ್ಕೆ ಮನೆಯ-
20 ರಾರುವಿಲ್ಲದನ್ತಾಗಿ ನಿಯಾಮಿಸಿ ಕುಡಿವೆನ್ದು ಪ್ರಾಧಾನ-
21 ಗ್ಗಂ ಶ್ರೀಮನುಮಲೆಯಾಳಪಂಡಿತದೇವರ್ಗ್ಗಂ ಸೋಮೇಶ್ವರಭ-
22 ಟ್ಟಯಂಗಳಿಗಂ ಚಕ್ರವರ್ತ್ತಿ ಬೆಸಸಲನಿಬರುವಿಳ್ದು
23 ಬೊಪ್ಪನಂ ಕರೆದು ನೀನುಂ ನಿನ್ನ ವಂಶದವರುಂ ಹೊಳಲ ಮ(ಂ)-
24 ನ್ನೆಯಮ ಮಾಣ್ಬುದೆನ್ದು ಮಾಣಿಸಲಾತನುವನ್ತೆ ಗೆ-

25 ಯ್ವಾನೆನ್ದು ಆಣೆಪತ್ರಮಂ ಕೊಟ್ಟು ತ್ರಿಪುರಾಂತಕ-
26 ದೇವರ ಬಳಿ ನೀರಂ ಕುಡಿದೀವಡಿಯಲ್ ಶಾಸನ-
27 ಮಂ ಕುಂದುವನಾತ್ಗಿಯೊಡಂಬಟ್ಟು ಬಂದನಾ ಕ್ರಮದಲಿ
28 ಮಲೆಯಾೞಿಪಂಡಿತದೇವರುಂ ತಾನುವಿಟ್ದು ಮನ್ನೆ-
29 ಯಮಂ ಬಿಟ್ಟು ಬೆಂಣೆವೂರು ಹನ್ನೆರಡಱ ಪ್ರಭುಗಾವು-
30 ಣ್ಡುಗಳ ನೀರಗುಂದದ ಎರಡುಂ ಹಡಂಗಿಲೆಯ ಪೊಂ-
31 ಗೊೞದ ಬಿದಿರಹಳ್ಳಿಯ ಹಹನೂರ ಹೊಂನವತ್ತಿಯ
32 ಕುಱುವತ್ತಿಯ ಬಾಳ್ಗೞಿಯೆನ್ತು ಮೂವ-
33 ತ್ತಿಚ್ಛಾರ್ಸಿರದ ಸನ್ನಿಧಾನದಲು ತ್ರೈಳೋಕ್ಯಮಲ್ಲೇಶ್ವರದೇವ-
34 ರ ಮುನ್ತೆಯುಂ ಹೊೞಲಲುಂ ಶಾಸನಮಂ ನಿಲಿಸಿದ-
35 ನಿಂತೀ ಧರ್ಮ್ಮಮನ್ತಪ್ಪದೆ ಪ್ರತಿಪಾಳಿಸುವರು ಈ ಧರ್ಮ್ಮ-
36 ಮನಾರೊಬ್ಬರು ಪ್ರತಿಪಾಳಿಸಿದವರಿಗೆ ಕುರುಕ್ಷೇ-
37 ತ್ರ ವಾರಣಾಸಿಯಲು ಸೂರ್ಯ್ಯಗ್ರಹ-
38 ಣದೆೞು ಸಾಸಿರ ವೇದಪಾರಗರಪ್ಪ ಬ್ರಾಹ್ಮಣ-
39 ರ್ಗ್ಗೆ ಸಾಸಿರ ಕವಿಲೆಯ ಕೋಡುಂ ಕೊೞಗುಮಂ ಹೊಂ-
40 ನಲು ಕಟ್ಟಿಸಿ ದಕ್ಷಿಣೆವೆರಸಿ ಕೊಟ್ಟ ಪುಣ್ಯ-
41 ವಕ್ಕುವೀ ಧರ್ಮ್ಮಮನಳಿದವನೀ ಪೇೞ್ದ ಸ್ಥಾನಂ-
42 ಗೞಲು ಸಾಸಿರ ಕವಿಲೆಯುಂ ಬ್ರಾಹ್ಮ-
43 ಣರುಮನಳಿದ ಮಹಾಪಾತಕನಕ್ಕು ॥ ಸಾಮಾ-
44 ನ್ಯೋಯಂ ಧರ್ಮ್ಮಸೇತುರ್ನ್ನೃಪಾಣಾಂ ಕಾಲೇ ಕಾಲೇ ಪಾಲ-
45 ನೀಯೋ ಭವದ್ಭಿಃ । ಸರ್ವ್ವಾನೇತಾನ್ ಭಾಗಿನಃ ಪಾ-
46 ರ್ತ್ಥಿವೇಂದ್ರಾನ್ ಭೂಯೋ ಭೂಯೋ ಯಾಚ-
47 ತೇ ರಾಮಭದ್ರಃ ॥ ಸ್ವದತ್ತಾಂ ಪರದತ್ತಾಂ ವಾ
48 ಯೋ ಹರೇತ ವಸುಂಧರಾಂ । ಷಷ್ಟಿರ್ವರ್ಷಸಹ-
49 ಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ ॥

## No. 170.

(*A.R. No.* 28 *of* 1904.)

ON A SLAB SET UP IN FRONT OF THE KALLESVARA TEMPLE AT AMBALI, KUDLIGI TALUK, SAME DISTRICT.

This is dated **Chālukya-Vikrama year 30, Pārthiva, Pushya, amāvāsye, Sōmavāra, Uttarāyaṇa-saṅkrānti, Vyatīpāta.** The date is irregular. By the *tithi* the equivalent would be A.D. 1106 January 7 Sunday, not Monday, as stated, Uttarāyaṇa 14. It refers itself to the reign of the Chāḷukya king **Tribhuvanamalladēva.** Under the orders of **Aṇukapallavarāya-Daṇḍanāyaka,** an officer in charge of the toll-revenue, the *Heggaḍes* of toll-revenue *viz.*, **Kēśirāja** and **Kāḷimarasa** are stated to have made a grant of a part of the toll-revenue to the *Mahājanas* of **Ammeḷe** for repairs to the tank Hiriyakeṟe, confirming the grant formerly made for the purpose, besides giving some land, free of taxes.

1 ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ ತ್ರೈಲೋಕ್ಯನಗರಾರಂಭ(ಂ)-
2 ಮೂಲಸ್ತಂಭಾಯ ಶಂಭವೇ ॥ ವಿಶುದ್ಧ(ಂ)ಜ್ಞಾನದೇಹಾಯ ತ್ರಿವೇದೀದಿವ್ಯಚ-
3 ಕ್ಷುಷೇ । ಶ್ರೇಯಃಪ್ರಾಪ್ತಿನಿಮಿತ್ತಾಯ ನಮಸ್ಸೋಮಾರ್ದ್ಧಧಾರಿಣೇ ॥
4 ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀಪ್ರಿಥ್ವೀವಲ್ಲಭ ಮಹಾರಾಜಾಧಿರಾ-
5 ಜ ಪರಮೇಶ್ವರ ಪರಮಭಟ್ಟಾರಕ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭ-
6 ರಣಂ ಶ್ರೀಮತ್ತ್ರಿಭುವನಮಲ್ಲದೇವರ ವಿಜಯರಾಜ್ಯಮುತ್ತರೋತ್ತರಾ-

7 ಭಿವೃದ್ಧಿಪ್ರವರ್ದ್ಧಮಾನಮಾಚಂದ್ರಾರ್ಕ್ಕತಾರಂಬರಂ ಸಲುತ್ತುಂ ಕಲ್ಯಾ-
8 ಣಪುರದ ನೆಲೆವೀಡಿನೊಳು ಸುಖಸಂಕಥಾವಿನೋದದಿಂ ರಾಜ್ಯಂಗೆ-
9 ಯ್ಯುತ್ತಮಿರೆ ತತ್ಪಾದಪದ್ಮೋಪಜೀವಿ ಸಮಸ್ತಪ್ರಶಸ್ತಿಸಹಿತಂ ಶ್ರೀಮನ್ಮಹಾ-
10 ಮಂಡಳೇಶ್ವರಂ ತ್ರಿಭುವನಮಲ್ಲಪಾಂಡ್ಯದೇವರು ನೊಣಂಬವಾಡಿ ಮೂವತ್ತಿರ್ಚ್ಛಾಸಿರಮು
11 . . . . ಉವಿನ ನೆಲೆವೀಡಿನೊಳ್ಸುಖಸಂಕಥಾವಿನೋದದೊಳಿರೆ ಸಮಸ್ತಪ್ರ
12 . . . . ಶ್ರೀಮನ್ಮಹಾಮಂಡಳೇಶ್ವರ ಘಟ್ಟಿದೇವರಸರು ಕೊಟ್ಟೂರೊಳು ಸು . . .
13 . . . ಮಚಾಳುಕ್ಯವಿಕ್ರಮವರ್ಷದ ೩೦ ನೆಯ ಪಾರ್ತ್ಥಿವಸಂವತ್ಸರದ ಪ್ರಶ್ಯ
14 . . ಸ್ಯ ಸೋಮವಾರ ಉತ್ತರಾಯಣಸಂಕ್ರಾನ್ತಿ ವ್ಯತೀಪಾತಂ ಕೂಡಿದಂದು
15 ಶ್ರೀಮನ್ಮಹಾಪ್ರಧಾನ ನೊಣಂಬವಾಡಿ ಮೂವತ್ತಿರ್ಚ್ಛಾಸಿರದ ವಡ್ಡರಾವುಳ ಹೆ-
16 ರ್ಜ್ಜುಂಕದಧಿಷ್ಠಾಯಕನಣುಕಪಲ್ಲವರಾಯದಂಡನಾಯಕರ ಬೆ-
17 ಸದಿಂ ದೇವರ ಸುಂಕದಹೆಗ್ಗಡೆ ಕೇಸಿರಾಜನುಂ ಕಾಳಿಮರಸ-
18 ನುಂ ಶ್ರೀಮದಮ್ಮೆಳೆಯೂರೊಡೆಯ ಮಹಾಜನವಯ್ವದಿಂಬ
19 . ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಮಾಡಿ ಹಿರಿಯಕೆಱೆಯ
20 ಮೆಯ್ಗ್ಗಲಸವಂ ನಡೆಯಿಸುವನ್ತಾಗಿ ತಮ್ಮ ಸನ್ತಾಯದೆಲೆಯ ಹೇಱಿನ
21 ವಡ್ಡರಾವುಳ ಹೆರ್ಜ್ಜುಂಕಂ ಹೇಱಿಂಗೆ ಪಣವಯ್ದು ಹೊಳಗೆ ಹೇ-
22 ಱಿಂಗೆ ಹಾಗವೊನ್ದು ಆ ಲೆಕ್ಕದಲು ಬಿಟ್ಟರು ಪೂರ್ವ್ವದಲಾ ಕೆಱೆಗೆ ನಡವನ್ತಪ್ಪ
23 ಕುಳಿಯಸುಂಕ ಎಲೆಯ ಹೇಱಿಂಗೆ ಹಾಗವೆರಡು ವೀಸವೊನ್ದು ಅಡಕೆಯಾ-
24 ಯಂ ಪೊಂಗೆ ಹಾಗ ವೊನ್ದರ ಲೆಕ್ಕ ಕಾರಪುಣ್ಣಮಿಯಲು ಗೆಲ್ವೆತ್ತಿನ ಸೇಸೆ ಗ-
25 ದ್ಯಾಣ ವೊನ್ದು ಮೇದರಲ್ಲಿದಬ್ಬಣಿಗೆದೆಱೆಯ ನೋಡಿಕೊಂಬರು ಬೆಳ್ಳಕ-
26 ಟ್ಟೆಯ ಕೋಡಿಯ ಗದ್ದೆ ಮತ್ತರೊನ್ದು ಊರ ಗದ್ದೆಗೆಲ್ಲಂ ಬಿತ್ತುವಟ್ಟಂ ನೂಱು
27 ಕಮ್ಮಕ್ಕೆ ಕೊಳಗವಯ್ದು ಆ ಲೆಕ್ಕ ಆ ಕೆಱೆಯ ಮೂಡಣ ಕೋಡಿಯ-
28 ರೆಯ ಕ್ಕೈ ಮತ್ತರು ಹನ್ನೆರಡು ಇನ್ತೀ ಧರ್ಮ್ಮಮಂ ತಪ್ಪದೆ ಪ್ರತಿಪಾಳಿ-
29 ಸಿದವರ್ಗ್ಗೆ ಶ್ರೀಗಂಗಾದೇವಿಯ ವಾರಣಾಸಿಯ ಕುರುಕ್ಷೇತ್ರದ ಸ್ಥಾನ-
30 ದಲ್ಲಿ ಸಾಯಿರ ಕವಿಲೆಯ ಕೋಡುಂ ಕೊಳುಗುಮಂ ಸುವರ್ಣ್ಣದಲು
31 ಕಟ್ಟಿಸಿ ಚತುರ್ವ್ವೇದಪಾರಗರಪ್ಪ ಸಬ್ರಾಹ್ಮಣರ್ಗ್ಗೆ ಕೊಟ್ಟ ಫಳಮಕ್ಕು ॥
32 ಇನ್ತೀ ಧರ್ಮ್ಮಮನಳಿದವರಾ ಬ್ರಾಹ್ಮಣರುಮನಾ ಪಶುವು-
33 ಮನಾ ತೀರ್ತ್ಥಂಗಳ ತಡಿಯಲು ಕೊನ್ದ ಮಹಾಪಾತಕದೋಶಮನೆ-
34 ಯ್ದುವರು ॥ ಸ್ವದತ್ತಂ ಪರದತ್ತಂ ವಾ ಯೋ ಹರೇತಿ ವಸುನ್ಧರಾ[ಂ*] ಷ-
35 ಷ್ಟಿರ್ವ್ವರ್ಷಸಹಶ್ರಾಣಿ ವಿಷ್ಠಾಯಾಂ ಜಾಯತೇ ಕೃಮಿ[ಃ*] ॥
35 ಶ್ರೀಕಲಿದೇವಸ್ವಾಮಿದೇವರ ಕೆಯ್ಯಿಂ ಮೂಡ ಹತ್ತಿರೆ ಸತ್ರಕ್ಕೆ ಅಯ್ವ-
37 ದಿಂಬರು ಮಹಾಜನಂಗಳು ಧಾರಾಪೂರ್ವ್ವಕಂ ಮಾಡಿ ಕೋಗಳಿಯ ಗಡಿಂಬದ-
38 ಲು ಬಿಟ್ಟ ಮತ್ತರು ಅಯ್ದು ॥ ಮತ್ತಮಾ ಪುಣ್ಯತಿಥಿಯಲು ಅಣುಕಪಲ್ಲವ-
39 ದಂಡನಾಯಕಂ ಶ್ರೀಸ್ವಯಂಭುಕಲಿದೇವಸ್ವಾಮಿಯ ವೀಳೆಯಕ್ಕೆ ದೇವರ ತೋಂಟ-
40 ದೆಲೆಯಡಕೆಯ ಸುಂಕವಂ ಸರ್ವನಮಸ್ಯಮಾಗಿ ಬಿಟ್ಟರು ।

## No. 171.

(*A.R. No.* 210 *of* 1913.)

ON THE ROCKY FLOOR OF THE RAMALINGESVARA TEMPLE AT DAMMURU, BELLARY TALUK, SAME DISTRICT.

This is damaged. The preserved portion of the date is **Chālukya-Vikrama year 31, Vyaya, Śrāvaṇa (Vyaya = A.D. 1106–07)**. The record refers itself to the reign of the Chāḷukya king **Tribuvanamalladēva** whose *Mahāmaṇḍalēśvara* **Mallarasa** is said to have made a gift for the service of a god (name lost) **of Dammara.**

1 [1] ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ ತ್ರೈಳೋಕ್ಯನಗರಾರಂಭಮೂಲಸ್ಥಂಭಾ-
2 ಯ ಶಂಭವೇ [॥*] ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀಪೃತ್ವೀವಲ್ಲಭ ಮಹಾರಾಜಾಧಿರಾಜ ರಾ-
3 ಜಪರಮೇಶ್ವರ ಪರಮಭಟ್ಟಾರಕ ಸತ್ಯಾಶ್ರಯಕುಳತಿಳಕ ಚಾಳುಕ್ಯಾಭ-
4 ರಣ ಶ್ರೀಮತು ತ್ರಿಭುವನಮಲ್ಲದೇವರ ವಿಜಯರಾಜ್ಯಮುತ್ತರೋತ್ತರಾಭಿ-
5 ವೃದ್ಧಿಪ್ರವದ್ಧ[ರ್*]ಮಾನಮಾಚಂದ್ರಾರ್ಕ್ಕತಾರಂ ಸಲುತ್ತ(ಂ)ಮಿರೆ ಕಲ್ಯಾಣಪುರದ ನೆಲವೀಡಿ-
6 ನೊಳು ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತ(ಂ)ಮಿರೆ ತತ್ಪಾದಪದ್ಮೋಪಜೀವಿ
7 ಸಮಧಿಗತಪಂಚಮಹಾಶಬ್ದ ಮಹಾಮಣ್ಡಳೇಶ್ವರಂ ವೀರಮಹೇಶ್ವರಂ [ಚೋ]ಳ-
8 ಕಟ[ಕಕ]ರಿತುರಗಪಟು[ಸುಭಟ]ನಿಚಯನಿಚಿತಬಳ[ವ]ದರಿಬಳತಿಮಿರಖಣ್ಡನ-
9 ಪ್ರತಾಪಮಾರ್ತ್ತಣ್ಡ ನಿಕರ[ರೊಳ್ಗಂ]ಡ ದ್ರವಿಳಮಂಡಳಖಸಿರಖಂಡನ ಮಂಡಳಿಕಮು[ಖ]-
10 [ಮಂಡನನದಟ]ಮಂಡಳಿಕತಾರಕಾಸು[ರಾರಿ] ದಸೆಕನ್ಧಮುರಾರಿ ಮಿತ್ರಮಂಡಳಿಕ[ಕುಳಾರ್ಣವ]-
11 ಚಂದ್ರ ಭೋಗಾಮರೇಂದ್ರ ಸತ್ಯ[ವಿಖ್ಯಾತ] ಮಂಡಳಿಕಮಾನ್ಧಾತನಾಹವನೀಲ [ಸೇನೆ]ಯಂಕ[ಕಾಱ]
12 [ಪಲ್ಲಿ]ಕೋಟಘರಟ್ಟ [ಗೂ]ರ್ಜ್ಜರದಿ[ಶಾಪಟ್ಟ] ಶ್ರೀಮತು ತ್ರಿಭುವನಮಲ್ಲದೇವರ . . .
. . . . . . . .
13 ನಾಮಾದಿಸಮಸ್ತಪ್ರಶಸ್ತಿಸಹಿತಂ ಶ್ರೀಮನುಮಹಾಮಂಡಳೇಸ್ವರಂ ಮಲ್ಲರ . . . . . .
14 ಕ್ರಮವರ್ಷದ ೩೦ ನೆಯ ವ್ಯಯಸಂವತ್ಸರದ ಶ್ರಾವಣದ . . . . . . . . . . ಗ್ರ-
15 . . ಗ್ರಹಣ ಮಹಾಪರ್ವ್ವದೊಳು ದಂಮರದ ರಾಮ . . . . . . .
16 . . . . ಖಂಡಸ್ಫುಟಿತಜೀರ್ಣೋದ್ಧಾರಕ್ಕಂ . . . .
17 ಸರ್ವನಮಸ್ಯವಾಗಿ ಧಾರಾಪೂರ್ವ್ವಕಮ್ಮಾಡಿ . . . . .
18 . . . . ಕೊಟ್ಟರು . . . . . . . .
19 . . . . . . . .

## No. 172.

(*A.R. No.* 505 *of* 1915.)

ON A SLAB LYING IN KALKANTHARAYA TEMPLE AT KARAKANTHAPURA, A HAMLET OF PEDDATUMBALAM, ADONI TALUK, SAME DISTRICT.

This is dated **Chālukya-Vikrama year 31, Vyaya, Śrāvaṇa, puṇṇame, Budhavāra, Sōma-grahaṇa** corresponding to **A.D. 1106, July 17** Tuesday (not wednesday) on which day there was a lunar eclipse. It refers itself to the reign of the Chāḷukya king **Tribhuvanamalladēva.** The *Mahāmaṇḍalēśvara* **Mallarasa,** reputed for his bravery and conquests, is said to have made a gift of land for musical service, offerings, *etc.*, of the god Ka**ṟek**aṇṭhēśvara. The *Mahājanas* of the village **Tumbuḷa** also made some contribution out of the toll-revenue of the village for the service of the same god.

ಶ್ರೀ ಶ್ರೀ ಶ್ರೀ ಶ್ರೀ

1 ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ ತ್ರೈಳೋಕ್ಯನಗರಾರಂಭಮೂಲಸ್ತಂಭಾಯ ಶಂಭ-
ವೇ ೞ
2 [ಸ್ವ]ಸ್ತಿ ಸಮಸ್ತಭುವನಾಶ್ರಯ ಶ್ರೀಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮ-
3 [ಭ]ಟ್ಟಾರಕ ಸತ್ಯಾಶ್ರಯಕುಳತಿಳಕ ಚಾಳುಕ್ಯಾಭರಣ ಶ್ರೀಮತ್ತ್ರಿಭುವನಮಲ್ಲದೇ-
4 ವರ ವಿಜಯರಾಜ್ಯಮುತ್ತರೋತ್ತರಾಭಿವೃದ್ಧಿಪ್ರವರ್ದ್ಧಮಾನಮಾಚಂದ್ರಾರ್ಕ್ಕತಾರಂ ಸಲುತ್ತಮಿ-
5 ರೆ ಕಲ್ಯಾಣಪುರದ ನೆಲೆವೀಡಿನೊಳ್ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ ತತ್ಪಾ-
6 ದಪದ್ಮೋಪಜೀವಿ ಸಮಧಿಗತಪಂಚಮಹಾಶಬ್ದ ಮಹಾಮಣ್ಡಳೇಶ್ವರ ವೀರಮಹೇಶ್ವರಂ
7 ಚೋಳಕಟಕಕರಿತುರಗಪಟುಸುಭಟನಿಚಯನಿಚಿತಬಳವದರಿಬಳತಿಮಿರಖಣ್ಡನಪ್ರತಾ-
8 ಪಮಾರ್ತ್ತಣ್ಡ ನಿಕರರೊಳ್ಗಣ್ಡ ದ್ರವಿಳಮಣ್ಡಳಿಕಶಿರಃಖಣ್ಡನ ಮಣ್ಡಳಿಕಮುಖಮ-
9 ಣ್ಡನನದಟಮಂಡಳಿಕತಾರಕಾಸುರಾರಿ ದಸೆವನ್ಧಮುರಾರಿ ಮಿತ್ರಮಣ್ಡಳಿಕಕು-
10 ಳಾರ್ಣ್ನವಚಂದ್ರ ಭೋಗಾಮರೇಂದ್ರ ಸತ್ಯವಿಖ್ಯಾತ ಮಂಡಳಿಕಮಾನ್ಧಾತನಾಹ-

---

[1] The inscription is written in characters of about the 15th century A.D.

11 ವನೀಜ । ಸೇನೆಯುಂಕಕಾಜ । ಪಲ್ಲಿಕೋಟಘರಟ್ಟ ಗೂರ್ಜ್ಜರದಿಶಾಪಟ್ಟ ಶ್ರೀಮತ್ತ್ರಿ)-
12 ಭುವನಮಲ್ಲದೇವರ ಕಟ್ಟಿದಲಗು ಮಲೆವರನಲಗು ನಾಮಾದಿಸಮಸ್ತಪ್ರ-
13 ಶಸ್ತಿಸಹಿತಂ ಶ್ರೀಮನ್ಮಹಾಮಣ್ಡಳೇಶ್ವರಂ ಮಲ್ಲರಸರ್ ಶ್ರೀಮಚ್ಚಾಳುಕ್ಯವಿಕ್ರ-
14 ಮವರ್ಷದ ೩೧ ನೆಯ ವ್ಯಯಸಂವತ್ಸರದ ಶ್ರಾವಣ ಪುಣ್ಣಮಿ ಬುಧ-
15 ವಾರದನ್ದು ಸೋಮಗ್ರಹಣಮಹಾಪರ್ವ್ವದೊಳ್ ಶ್ರೀಕಱಿಕಣ್ಠದೇವರ ಗೀತವಾದ್ಯನೃ-
16 ತ್ಯಕ್ಕಂ ದೇವರಂಗಭೋಗಕ್ಕಂ ಖಣ್ಡಸ್ಫುಟಿತಜೀರ್ಣ್ನೋದ್ಧಾರಕ್ಕಂ ಸಿಂದವಾಡಿನಾಡೊಳಗಣಾ-
17 ದವನಿ ೫೦೦ ಱಱ ಕಮ್ಬಂ ತುಂಬಳ ೩೦ತ್ತಱ ಬಳಿಯ ಬಾಡಂ ಬಡಗಿಕೊಂಟೆಯ
18 ಮನೆದೆಱೆ ಹೊಲೆದೆಱೆ ಸಾದಂ ಬಣ್ಣಿಗೆ ಬಳಂಬೆಯತಱೆ ತಳ ಸಾರಿಗೆ ಕಾಣಿಕೆ ಕವಣಾಯ
19 ದಣ್ಡದಾಯವಿನ್ತಿನಿತುಮಂ ಮತ್ತಮಲ್ಲಿಯ ತಳವೃತ್ತಿ ೪೦ತ್ತು ಮತ್ತರ್ಕ್ಕಯ್ಯುಂ ದೇವರ
20 ನಿವೇದ್ಯಕ್ಕೆ ಹಿರಿಯಕೆಱೆಯ ಕೆಳಗೆ ೬೦೦ ಕಮ್ಮ ಗದ್ದೆಯುಮಂ ಮತ್ತಮೂರಿಂ
21 ತೆಂಕಣ ಹಳ್ಳದ ಕಾಲ್ವೆಯಲ್ಲಿ ೩ ಮತ್ತರು ಗದ್ದೆಯುಮ(ಂ)ನಾಬಳಿಯ ಬಾಡಂ [ಚಿ]ಕ್ಕಬ-
22 ನವಸೆಯುಮಂ ಸರ್ವ್ವನಮಸ್ಯವಾಗಿ ಧಾರಾಪೂರ್ವ್ವಕಂ ಮಾಡಿ ಕೊಟ್ಟರ್ ೧ ಸ್ವದತ್ತಾಂ ಪರದ-
23 ತ್ತಾಂ ವಾ ಯೋ ಹರೇತ ವಸುನ್ಧರಾಂ ಷಷ್ಟಿರ್ವ್ವರ್ಷಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ ॥
24 ಮು[ಟ್ಟಿ]ದಲಗಹಿತರ ಬೆನ್ನಟ್ಟಿದಲಗು ಜಗದೊಳುಳ್ಳ ಕಂಟಕರಂ ಕೂರ್ಬಟ್ಟಳಮನಿಸು-
25 ವ ಚಕ್ರಿಯ ಕಟ್ಟಿದಲಗು ಮಲ್ಲಿಭೂಪನಾದಿದಿಳೀಪ ೦ ಬೆಸನಂ ಶ್ರೀವಿಕ್ರಮಾಂ-
26 ಕಂ ಬೆಸಸೆ ಪಸದಮೆನ್ದಾನ್ತುಕೊಣ್ಡಾಂ ಬಳಿಕ್ಕಾ ವಿಸಕಂ ಕೀಳಾಗದಾರಾರೊಳವು ಕಳಲದಾರಾರ
27 (ಳವುಕಳಲದಾರಾರ) ತೇಜಪ್ರಭಾವಪ್ರಸರಂ ಪಿನ್ದಾಗದಾರಾರದಟು ಮುಱಿಯದಾರಾರ
28 ಶೌರ್ಯ್ಯೋದಯಂ ನೀರಸಮನ್ತೇನಾಗದುದ್ವೃದ್ರಿಪುನ್ನೃಪಮದವಿಚ್ಛೇದನಂ ಮಲ್ಲಭೂಪ ॥
29 ಮತ್ತಂ ಮಹಾಪಟ್ಟಣಂ ತುಂಬುಳಮಹಾನಗರಂ ನಡೆಸುವ ಪಡಿ ಚೈತ್ರದಲು
30 ಗದ್ಯಾಣ ೧ ಪವಿತ್ರದಲು ಗದ್ಯಾಣ ೧। ಮೂಲೆವತ್ತಂ ಹೇಱಿಂಗೆ ಹಿರಿಯಸೊ-
31 ಳಸೆ ൨ ಸೊಂಟಿಗೆಯಕ್ಕಿ ಮತ್ತಂ ತಳದ ಬಳಂಜಿಗರುಂ ನಾನಾದೇಶಿಗಳುಮಿಬ್ಬರು ಕೊಟ್ಟರ್
32 ಅರಿಸಿನದ ಹೇಱು ೧ ಕ್ಕೆ ಪ೨ ೫ ಕು(ಂ)ಣ್ಣೆಯ ಹೇಱಿಂಗೆ ಪ ೫ ಅಡಕೆ ಹೇಱಿಂಗೆ ൨೦
33 ಮೆಣಸು ಹೇಱಿಂಗೆ ಹಿರಿಯಸೊಳಸೆ ൨ ಜೀರಗೆ ಹೇಱಿಂಗೆ ಹಿರಿಯ ಸೊಳಸೆ ൨
34 ಕಚ್ಚಗುಡಕ್ಕೆ ಹೇಱಿನರ್ದ್ಧ ಬೆಲ್ಲಂ ಭಣ್ಡಿಗೆ ೧೦ ಹೇಱಿಂಗೆ ൨ ಹನ್ನವಣದಲ್ಲಿ ಹೇಱಿಂ-
35 ಗೆ ಯೆಲೆ ೫೦ ೦ ಮತ್ತಂ ನಾಡ ಮನ್ನೆಯರುಂ ಚಾಥೋರೆಗಳುಂ ಪ್ರಭು-
36 ಗಾವುಣ್ಡಗಳುಮಿಬ್ಬರು ಕೊಟ್ಟರ್ ಗ್ರಾಮಾನುಗ್ರಾಮದಲುತ್ತಮದಲು
37 ಪಣ ೩ ಮಧ್ಯಮದಲು ಪಣ ൨ ಕನಿಷ್ಟದಲು ಪಣ ೧ ಇನ್ತೀ ಧರ್ಮ್ಮಮಂ
38 ಚನ್ದ್ರಾರ್ಕ್ಕತಾರಂಬರಂ ನಡೆಯಿಸುವರ್ ೦ ಸಾಮಾನ್ಯೋಯಂ ಧರ್ಮ್ಮಸೇತುಂ
39 ನೃಪಾಣಾಂ ಕಾಲೇ ಕಾಲೇ ಪಾಲನೀಯೋ ಭವದ್ಭಿಃ । ಸರ್ವ್ವಾನೇತಾನ್ಭಾಗಿನಃ ಪಾ-
40 ರ್ಥಿವೇನ್ದ್ರಾನ್ಭೂಯೋ ಭೂಯೋ ಯಾಚತೇ ರಾಮಚನ್ದ್ರಃ ೦ ಈ ಧರ್ಮ್ಮ-
41 ಕನುಕೂಳರಾದವರ್ಗ್ಗನನ್ತಪುಣ್ಯಂ ಪ್ರತಿಕೂಳರಾದವರ್ಗ್ಗೆ ವಾರ-
42 ಣಾಸಿಯೊಳ್ ಸಾಸಿರ್ವ್ವಬ್ರಾಹ್ಮಣರುಮಂ ಸಾಸಿರ ಕವಿಲೆ-
43 ಯುಮನಳಿದ ಪಾತಕವಕ್ಕು ।
44 ಯೋಗತಮ್ಮ[1]

## No. 173.

(*A.R. No.* 95 *of* 1904.)

ON THE 11TH SLAB SET UP ON THE SOUTH SIDE OF THE KALLESVARA TEMPLE AT BAGALI, HARAPANAHALLI TALUK, SAME DISTRICT.

This is dated **Chālukya-Vikrama year 32, Sarvajit, Mārgaśira, amāvāsye, Sōmavāra, Sūrya-grahaṇa, Vyatīpāta** corresponding to **A.D. 1107 December 16, Monday,** when there was a solar eclipse. It refers itself to the reign of the Chāḷukya king

[1] This line is written in a different hand.

**Tribhuvanamalladēva** whose *Daṇḍanāyaka* **Barmmarasa** is said to have granted one *gadyāṇa* per month out of the pannāya of the village **Bāḷguḷi** to the *Mahājanas* for the repairs of the tank Hiriyakeṟe, in the presence of the god Kalidēva.

1 ಸ್ವಸ್ತಿ [||*] ಸಮಸ್ತಭುವನಾಶ್ರಯ ಶ್ರೀಪ್ರಿಥ್ವೀವಲ್ಲಭ ಮಹಾರಾಜಾಧಿರಾಜ ಪರ-
2 ಮೇಶ್ವರ ಪರಮಭಟ್ಟಾರಕಂ ಸತ್ಯಾಶ್ರಯಕುಳತಿಳಕಂ ಚಾಳು-
3 ಕ್ಯಾಭರಣಂ ಶ್ರೀಮತ್ತ್ರಿಭುವನಮಲ್ಲದೇವರ ವಿಜಯರಾಜ್ಯಮು-
4 ತ್ತರೋತ್ತರಾಭಿವ್ರಿದ್ಧಿಪ್ರವರ್ದ್ಧಮಾನಮಾಚಂದ್ರಾರ್ಕ್ಕತಾರಂಬರಂ ಸಲುತ್ತಮಿ-
5 ರೆ ◎ ತತ್ಪಾದಪದ್ಮೋಪಜೀವಿ ಸಮಸ್ತರಾಜ್ಯಭರನಿರೂಪಿತಮಹಾಮಾತ್ತ್ಯ-
6 ಪದವೀವಿರಾಜಮಾನಮಾನೋನ್ನತಪ್ರಭುಮಂತ್ರೋತ್ಸಾಹಶಕ್ತಿತ್ರಯಸಂ-
7 ಪ(ಂ)ನ್ನಂ ನುಡಿದುಮತ್ತನ್ನನಾಶ್ರಿತಜನಕಲ್ಪವೃಕ್ಷಂ ಪತಿಕಾರ್ಯ್ಯದಕ್ಷಂ ಗೋ-
8 ತ್ರಪವಿತ್ರಂ ಪರಾಂಗನಾಪುತ್ರ ಸಾಹಸೋತ್ತುಂಗನಯ್ಯನಸಿಂಗಂ ನಾ-
9 ಮಾದಿಸಮಸ್ತಪ್ರಶಸ್ತಿಸಹಿತಂ ಶ್ರೀಮದೆಚ್ಚುಪನ್ನಾಯದಧಿಷ್ಠಾಯಕಂ
10 ದಣ್ಡನಾಯಕಂ ಬರ್ಮ್ಮರಸರ್ ◎ ಸ್ವಸ್ತಿ ಶ್ರೀಮಚ್ಚಾಳುಕ್ಯವಿಕ್ರಮವ-
11 ರ್ಷ ೩೨ ನೆಯ ಸರ್ಬ್ಬಜಿತ್ಸಂವತ್ಸರದ ಮಾರ್ಗ್ಗಸಿರದಮಾವಾಸ್ಯೆ ಸೋಮವಾರಂ ಸೂರ್ಯ್ಯಗ್ರ-
12 ಹಣಂ ಬ್ಯತೀಪಾತದಂದು ಶ್ರೀಸ್ವಯಂಭುಕಲಿದೇವಸ್ವಾಮಿದೇವರ ಸ(ಂ)ನ್ನಿಧಾನದೊಳ್ ಸ್ವಸ್ತಿ ಯ-
13 ಮನಿಯಮಸ್ವಾಧ್ಯಾಯಧ್ಯಾನಧಾರಣಮೌನಾನುಷ್ಠಾಣಪಾರಾಯಣ-
14 ಜಪಸಮಾಧಿಸಕಳಪಸ್ತುಗುಣಸಂಪನ್ನರಪ್ಪ ಶ್ರೀಮತು ಹರಿಶ್ಚಂದ್ರದತ್ತಿಯಗ್ರಹಾ-
15 ರಂ ಬಾಳ್ಗುಳಿಯೂರೊಡೆಯಪ್ರಮುಖಮಹಾಜನಮಯ್ವದಿಂಬರ ಕಾಲಂ ಕರ್ಚ್ಚಿ ಧಾರಾ-
16 ಪೂರ್ಬ್ಬಕ(ಂ)ಮ್ಮಾಡಿ ಹಿರಿಯಕೆಱೆಯ ಕೆಲಸಕ್ಕೆ ಪ(ಂ)ನ್ನಾಯದ ಸುಂಕದೊಳಗೆ ತಿಂಗಳಿಂಗೆಯೊಂ-
17 ದು ಗದ್ಯಾಣ ಪೊನ್ನನಲ್ಲಿ ನಡವ ಪೆರ್ಗ್ಗಡೆ ಕರಣಂಗಳು ಕುಡುತಂ ಬರ್ಪ್ಪಂತಾಗಿ ಬಿಟ್ಟನಿನ್ತೀ ಧ-
18 ರ್ಮ್ಮಮಂ ಪ್ರತಿಪಾಳಿಸಿದವರ್ಗ್ಗೆ ಪ್ರಯಾಗೆ ವಾರಣಾಸಿ ಕುರುಕ್ಷೇತ್ರಮ-
19 ರ್ಘ್ಯತೀರ್ತ್ಥದಲು ಸಾಸಿರ್ಬ್ಬರ್ವ್ವೇದಪಾರಗರ್ಗ್ಗೆ ಸಾಸಿರ ಕವಿಲೆಯನುಭ-
20 ಯಮುಖಿಗೊಟ್ಟ ಫಲಮಕ್ಕುಮೀ ಧರ್ಮ್ಮಮನಳಿದವರಾ
21 ಪುಣ್ಯಸ್ಥಾನಂಗಳಲನಿಬರು ಬ್ರಾಹ್ಮಣರುಮನನಿತು ಕವಿಲೆಯ-
22 ಮಂ ಸ್ವಹಸ್ತವಧೆಯಂ ಮಾಡಿದ ಪಾತಕಮಕ್ಕು ◎
23 ಸ್ವದತ್ತಾಂ ಪರದತ್ತಾಂ ವಾ ಯೋ ಹರೇತಿ ವಸು(ಂ)ನ್ಧರಾ[ಂ*] ಷಷ್ಟಿರ್ವರ್ಷ-
24 ಸಹಶ್ರಾಣಾಂ ವಿಷ್ಠಾಯಾಂ ಜಾಯತೇ ಕ್ರಿಮಿಃ । ಸಂದಾ-
25 ತಾತ್ಸುಮಹತ್ಸಖ್ಯಂ ದುಃಖಮನ್ಯತ್ರ ಪಾಲನಂ ದಾನಂ ವಾ ಪಾಲನಂ
26 ವೇತಿ ದಾನಾತ್ಶ್ರೇಯೋನುಪಾಲನಾತ್ ॥ ಮಂಗಳ ಮಹಾಶ್ರೀಶ್ರೀ

## No. 174.

(*A.R. No.* 95-*A of* 1904.)

ON THE SAME SLAB.

This records the gift of the *vṛitti* lands granted by Mahādēvī, wife of a certain **Nādēva-Ghaissa** for the service of the god Vīra-Kēśavadēva. It is not dated but is engraved in characters similar to those of No. 173 and in its continuation.

1 ಶ್ರೀವೀರಕೇಶವದೇವರ ಶ್ರೀಮಾನ್ಯದ ಸ್ಥಳವೃತ್ತಿಯ ಗದ್ದೆ ತಂಬುಲಗೆಱೆಯ ಗದ್ದೆ ಕ ೧೦೦
2 ಮಾಚಿಸೆಟ್ಟಿಯಕೆಱೆಯ ಹಳುಗಿನೊಳಗೆ ಕ ೨೦೦ ಮತ್ತಂ ಮೂಡಣಬಯಲ ಗದ್ದೆ ಕ ೧೦೦ ಕಪ್ಪುರ-
ಗೆಱೆಗ-
3 ದ್ದೆ ಕ ೧೦೦ ಬೆಃಗರಕೆಱೆಯ ಗದ್ದೆ ಕ ೧೦೦ ಕೊಳಗದ ಸೋಮಯ್ಯ ನಂದಾದೀವಿಗೆಗೆ ಬಿಟ್ಟ ಮಣಲ-
ಕೆಯಿ ಕಳಲೆಗೆಱೆಯೊ-
4 ಳಗೆ ಮ ೧ ಮಾಳಗೆಯ ನಾದೇವಘೈಸ್ಸನ ಹೆಣ್ಡತಿ ಮಹದೇವಿಕವ್ವೆ ಶ್ರೀವೀರಕೇಶ[ವ*]ದೇವರಂಗ-
ಭೋಗರಂಗಭೋಗನಿವೇದ್ಯಕ್ಕೆ

5 ಧಾರಾಪೂರ್ವ್ವಕಂ ಮಾಡಿ ಬಿಟ್ಟ ತೋಟಸ್ಥಳದ ಯಾವರುಗಣ್ಣಾದ ತಮ್ಮ ಭೂಮಿಯೊಳಗೆ ಬಡಗಣ ಭಾ-
6 ಗದಲು ತೋಟ ಕಂ ೬೦ ಬಾಗುಳಿ ಮೊದಲಾಗಿ ಹನ್ನೆರಡು ಹಳ್ಳಿಯಲು ಹೂಱಗಣಿಂ ಬಂದು ಮಾಱಿದ
7 ಹತ್ತಿಯಾಯ ಶ್ರೀವೀರಕೇಶವದೇವರ ನಂದಾದೀವಿಗೆಗೆಯಶೇಷಮಹಾಜನಂಗಳು ಬಿಟ್ಟ ಧರ್ಮ್ಮ [॥*] ಸ್ವದತ್ತಂ ಪರದತ್ತಂ ವಾ ಯೋ
8 ಹರೇತಿ ವಸುಂಧರಾ[ಂ*] ಷಷ್ಟಿರ್ವರ್ಷಸಹಸ್ರಾಣಿ ವಿಷ್ಟಾಯಾ[ಂ*] ಜಾಯತೇ ಕ್ರಿಮಿಃ॥

## No. 175.

(*A.R. No.* 518 *of* 1915.)

ON A SLAB LYING NEAR THE MARISVAMI-MATHA AT CHINNATUMBALAM, ADONI TALUK, SAME DISTRICT.

This is dated **Chālukya-Vikrama year 32, Sarvajit, Pushya, puṇṇami, Maṅgaḷa-vāra, Sōma-grahaṇa** corresponding to **A.D. 1107 December, 31 Tuesday,** when there was a lunar eclipse, and refers itself to the reign of the Chāḷukya king **Tribhuvana-malladēva.** At the request of the *Daṇḍanāyaka* **Śrīdharayya,** the queen **Malayamatī-dēvī** is stated to have made the following grants out of the revenue raised in the village Tumbuḷa :—*gadyāṇas* 8 to the teacher of commentaries, *gadyāṇas* 8 to the Purāṇa-reader, *gadyāṇas* 12 to the teacher of the *khaṇḍikas* of the Ṛigvēda and the Yajurvēda, *gadyāṇas* 2 to the keeper of the sacred fire ; in all 30 *gadyāṇas*.

1 ಸ್ವಸ್ತಿ [॥*]ಸಮಸ್ತಭುವನಾಶ್ರಯ ಶ್ರೀಪ್ರಿಥ್ವೀವಲ್ಲಭ
2 ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾ-
3 ರಕಂ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ
4 ಶ್ರೀಮತ್ತ್ರಿಭುವನಮಲ್ಲದೇವರ ವಿಜೆಯರಾಜ್ಯಮು-
5 ತ್ತರೋತ್ತರಾಭಿವ್ರಿದ್ಧಿಪ್ರವರ್ದ್ಧಮಾನಮಾಚಂದ್ರಾರ್ಕ್ಕ-
6 ತಾರಂಬರಂ ಸಲುತ್ತಂ ಜಯನ್ತೀಪುರದ ನೆಲೆವೀಡಿನೊಳು ಸುಖಸಂ-
7 ಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ ಸ್ವಸ್ತ್ಯನವರತಪರಮ-
8 ಕಲ್ಯಾಣಾಭ್ಯುದಯಸಹಸ್ರಫಳಭೋಗಭಾಗಿನಿ ದ್ವಿತೀಯ-
9 ಲಕ್ಷ್ಮೀಸಮಾನೆ ಕಳಹಂಸಯಾನೆಯನವರತವಿತ್ತವಿತರಣ-
10 ವಿಸಿಷ್ಟದೀನಾನಾಥವಂದಿಬ್ರಿಂದಸಂತರ್ಪ್ಪಣೆ ಪಾತ್ರಮುಖದರ್ಪ್ಪಣೆ
11 ಚಾಳುಕ್ಯರಾಮರಾಜ್ಯಾಭ್ಯುದಯಶುಭಶೂಚನಾನೇಕಶು-
12 ಭಲಕ್ಷಣಲಕ್ಷಿತಾಂಗಿ ರಾಯಸರ್ಬಜ್ಞನರ್ಧ್ಧಾಂಗಿ ಮ್ರಿದುಮಧು-
13 ರವಚನರಚನೆಚತುರಕಳಾಳಾಪೆ ಗೋತ್ರರತ್ನಪ್ರದೀಪೆ ಶ್ರೀಮ-
14 ತು ಪಿರಿಯರಸಿ ತ್ರಿಭುವನಮಲ್ಲಪಟ್ಟಮಹಾದೇವಿ ಮಲಯಮತೀ-
15 ದೇವಿಯರು ಶ್ರೀಮಚ್ಚಾಳುಕ್ಯವಿಕ್ರಮಕಾಲದ ಮೂವತ್ತೆರಡನೆ-
16 ಯ ಸರ್ವ್ವಜಿತುಸಂವತ್ಸರದ ಪುಷ್ಯ ಪುಣ್ಣಮಿ ಮಂ-
17 ಗಳವಾರದಂದು ಸೋಮಗ್ರಹಣನಿಮಿತ್ತದಿಂ ಶ್ರೀಧರಯ್ಯದ-
18 ಣ್ಡನಾಯಕನ ಬಿನ್ನಪದಿಂ ಸಿಂದವಾಡಿ ನಾಡೊಳಗೆ ತಮ್ಮಾಳ್ಕೆಯ-
19 ಗ್ರಹಾರಂ ತುಂಬುಳದ ಮಹಾಜನಂ ನೂರನಾಲ್ವದಿಂ-
20 ಬರ್ಗ್ಗಂ ಧಾರಾಪೂರ್ವ್ವಕಂ ಮಾಡಿ ಬಿಟ್ಟ ಧರ್ಮ್ಮವಾ ವೂರಲು ಧರ್ಮ್ಮವೆ-
21 ತ್ತಳೆಯಾಗಿ ತೆಱುವ ಸಿದ್ಧಾಯದ ಪೊಂನೊಳಗೆ ವ್ಯಾಖ್ಯಾನದುಪಾ-
22 ಧ್ಯಾಯರ್ಗ್ಗೆ ಗದ್ಯಾಣವೆಂಟು ಪುರಾಣಭಟ್ಟರ್ಗ್ಗೆ ಗದ್ಯಾಣವೆಂಟು ರಿಗ್ವೇ-
23 ದಯಜುರ್ವ್ವೇದವನ್ತೆರಡು ಖಣ್ಡಿಕೆಯುಪಾಧ್ಯಾಯರ್ಗೆ ಗ-
24 ದ್ಯಾಣಂ ಹನ್ನೆರಡು ಅಗ್ನಿಷ್ಟಗೆಯ ಬ್ರಾಹ್ಮಣಂಗೆ ಗದ್ಯಾಣವೆರ-

25 ಡು ಅನ್ತು ಗದ್ಯಾಣಂ ಮೂವತ್ತು ॥ ಸಾಮಾನ್ಯೋಯಂ
26 ಧರ್ಮ್ಮಸೇತುಂ ನೃಪಾಣಾಂ ಕಾಲೇ ಕಾಲೇ ಪಾಲನೀಯೋ ಭವದ್ಭಿಃ
27 ಸರ್ವ್ವಾನೇತಾನ್ ಭಾಗಿನಃ ಪಾರ್ತ್ಥಿವೇನ್ದ್ರಾನ್ ಭೂಯೋ
28 ಭೂಯೋ ಯಾಚತೇ ರಾಮಭದ್ರಃ ॥ ಸ್ವದತ್ತಾಂ ಪರದ-
29 ತ್ತಾಂ ವಾ ಯೋ ಹರೇತ ವಸುನ್ಧರಾಂ ಷಷ್ಟಿಂ ವರ್ಷಸ-
30 ಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ ॥
31 ಸ್ವಸ್ತಿ ಶ್ರೀಮದಗ್ರಹಾರಂ ತುಂಬುಳದಶೇಷಮಹಾಜನಂಗಳ ಕಯ್ಯಲು ಅಱುವಂಟಿಗೆಗೆ ಚಕ್ರ-
32 ಸೆಟ್ಟಿ ಬಿಡಿಸಿದ ಮತ್ತರು ೧[॥*]

## No. 176.

(*A.R. No.* 115 *of* 1913.)

ON THE THIRD SLAB SET UP IN THE COURT-YARD OF BHIMESVARA TEMPLE AT NILAGUNDA, SAME TALUK AND DISTRICT.

This is damaged and dated **Chāḷukya-Vikrama year 33, Sarvadhāri,** . . . . . . . **Uttarāyaṇa-saṅkrānti** probably corresponding to **A.D. 1107 December 24 Thursday,** in the reign of the Chāḷukya king **Tribhuvanamalladēva.** It records the grant of some land made by a *Daṇḍanāyaka* (name lost) in charge of the toll-revenue, for the service of the god Vīrēśvaradēva.

1 ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ । [ತ್ರೈ]ಲೋ[]-
2 ಕ್ಯ . . . . . . ಮೂಲಸ್ತಂಭಾಯ [ಶಂಭವೇ] ॥
3 ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀಪೃಥ್ವೀವಲ್ಲಭ ಮಹಾರಾಜಾಧಿ-
4 ರಾಜ ಪರಮೇಶ್ವರ ಪರಮ[ಭಟ್ಟಾ]ರಕ ಸತ್ಯಾಶ್ರಯಕುಳತಿಳಕಂ
5 ಚಾಳುಕ್ಯಾಭರಣಂ ಶ್ರೀಮತ್ತ್ರಿಭುವನಮಲ್ಲ . . . ವಿಜಯರಾ-
6 ಜ್ಯಮುತ್ತರೋತ್ತರಾಭಿವೃದ್ಧಿ[ಪ್ರವರ್ದ್ಧಮಾನ] . . . ದ್ರಾರ್ಕ್ಕತಾ-
7 ರಂಬರಂ ಸಲುತ್ತಮಿರೆ ॥ . . . . . . . . . . . ಮ-
8 ಹಾಸಾಮನ್ತಾಧಿಪತಿ . . . . . . . . . . . . ಬ
9 . ವರಪ . . . . . . . . . . . . ಗೋತ್ರಪವಿ-
10 ತ್ರ ಪರಾಂಗನಾ . . . . . . . . . . ಸಾಹಸೋ-
11 ತ್ತುಂಗನಯ್ಯನಸಿಂ . . . . . . . . . . ಶ್ರೀಮನ್ಮಹಾ-
12 ಪ್ರಧಾನ ಭಾಣಸ . . . . . . . . . . ಪದ್ಮರಾಪ-
13 ಳದ ಸು . . ಮ . . . . . . . . ಕಥಾವಿನೋದ-
14 ದಿಂ ರಾ[ಜ್ಯಂ]ಗೆಯ್ಯುತ್ತ . . . . . . . . . ದಂಡನಾಯ-
15 ಕ ಗೋ . . . ರಸರು . . . . . . . . . ಸಮಸ್ತಪ್ರಸ-
16 ಸ್ತಿಸಹಿತಂ . . . . . . . . . . . ಗೆಯ್ದು .
17 ಡಲು . . . . . ಕಾಲದ ೩೩ ನೆಯ
18 ಸರ್ವ್ವಧಾರಿಸಂ . . . . . . . . . . . ವಾರದುತ್ತರಾಯಣ-
19 ಸಂಕ್ರಾಂತಿ ಪು . . . . . . . . . . ಬಿಕ್ಕಿಗ ೭೦೮ ಮೊ-
20 ದಲ ಬಾಡಂ . . . . . . . . . . . ತ್ತರದಿಶಾಭಾಗದ ಶ್ರೀಸ್ವಯಂ-
21 ಭುವೀರೇಶ್ವರದೇ . . . . . . . . . ನದೆಲಡ-
22 ಕೆಯ . . . . . . . . . . . . . ವೀಸಮಂ
23 ಬಿಟ್ಟರು ಈ ಧ . . ಪಾ . . . . . . . . . . . ವಾರಣಾಸಿ ಕುರುಕ್ಷೇತ್ರ
24 ಪ್ರಯಾಗೆ . . . . . , . . . . ವೇದಾಪಾರಗರಪ್ಪ ಸಹಸ್ರ
25 ಬ್ರಾಹ್ಮಣರ್ಗ್ಗೆ ಸಾ . . . . . . . . . ಭಯಮುಖಿಗೊಟ್ಟ ಫಳ-
26 ಮನೆಯ್ದುವರು . . . . ಕಿಡಿಸಿದ[ರಾ] ವಾರಣಾಸಿ ಕುರುಕ್ಷೇತ್ರ
27 ಪ್ರಯಾಗೆಯೊಳು . . . . . . . . ಸಹಸ್ರ ಬ್ರಾಹ್ಮಣರುಮಂ

28 ನಾ ಕ[ವಿ]ಲೆಯುಮಂ . . . . ದೋಶಮನೆಯ್ದುಗುಂ
29 ಸ್ವದತ್ತಂ ಪರದ . . . . . ರೇತಿ ವಸುನ್ಧರಾ ಷ-
30 ಷ್ಟಿರ್ವ್ವರ್ಷಸ . . . ವಿಷ್ಟಾಯಾಂ ಜಾ-
31 ಯತೇ ಕ್ರಿ . . . . . .
32 ಮಣ . . .

## No. 177.

(*A.R. No.* 94 *of* 1904.)

ON THE 10TH SLAB SET UP ON THE SOUTH SIDE OF THE KALLESVARA TEMPLE AT BAGALI, HARAPANAHALLI TALUK, SAME DISTRICT.

This is dated **Chāḷukya-Vikrama year 33, Sarvadhāri, Pushya, ba. 5, Bṛihavāra, Uttarāyaṇa-saṅkrānti** corresponding to **A.D. 1108 December 24, Thursday.** It refers itself to the reign of the Chāḷukya king **Tribhuvanamalladēva** whose feudatory **Tribhuvanamalla-Pāṇḍyadēva** is stated to have been ruling **Noḷambavāḍi thirty two-thousand.** Maleyāḷa- Vaḍḍabevahāri **Komara-Mūrka** is stated to have made a gift of *gadyāṇas* 5 for the service of the god Svyambhu-Kalidēva out of the interest accruing from the sum.

1 ಸ್ವಸ್ತಿ [।*] ಸಮಸ್ತಭುವನಾಶ್ರಯಂ ಶ್ರೀಪೃಥ್ವೀವಲ್ಲಭಂ ಮಹಾರಾ-
2 ಜಾಧಿರಾಜ ಪರಮೇಶ್ವರ ಪರಮಭಟ್ಟಾರಕಂ ಸತ್ಯಾ-
3 ಶ್ರಯಕುಳತಿಳಕಂ ಚಾಳುಕ್ಯಾಭರಣಂ ಶ್ರೀಮತ್ತ್ರಿಭು-
4 ವನಮಲ್ಲದೇವರ ವಿಜಯರಾಜ್ಯಮುತ್ತರೋತ್ತರಾಭಿವೃದ್ಧಿಪ್ರವರ್ದ್ಧಮಾ-
5 ನಮಾಚಂದ್ರಾರ್ಕ್ಕತಾರಂಬರಂ ಸಲುತ್ತಮಿರೆ ತತ್ಪಾದಪದ್ಮೋಪ-
6 ಜೀವಿ ◎ ಸ್ವಸ್ತಿ ಸಮಧಿಗತಪಂಚಮಹಾಶಬ್ದ ಮಹಾಮಣ್ಡಳೇಶ್ವರಂ
7 ಕಾಂಚೀಪುರವರೇಶ್ವರಂ ಯದುವಂಶಾಂಬರದ್ಯುಮಣಿ ಸುಭಟಚೂ-
8 ಡಾಮಣಿ ನಿಜಕುಳಕಮಳಮಾರ್ತ್ತಣ್ಡ ಪರಿಚ್ಛೇದಿಗಣ್ಡ ರಾಜಿಗಚೋಳಮ-
9 ನೋಭಂಗಂ ಶ್ರೀಮತ್ತ್ರಿಭುವನಮಲ್ಲದೇವಪಾದಾಬ್ಜಭೃಂಗಂ ನಾಮಾದಿ-
10 ಸಮಸ್ತಪ್ರಸಸ್ತಿಸಹಿತಂ ಶ್ರೀಮನ್ಮಹಾಮಣ್ಡಳೇಶ್ವರ ತ್ರಿ-
11 ಭುವನಮಲ್ಲಪಾಣ್ಡ್ಯದೇವರು ನೊಳಂಬವಾಡಿ ಮೂವತ್ತಿಚ್ಛಾ-
12 ಸಿರಮುಮಂ ದುಷ್ಟನಿಗ್ರಹಸಿಷ್ಟಪ್ರತಿಪಾಳನದಿ(ಂ)ನಾಳ್ದು ಸುಖದಿ ರಾ-
13 ಜ್ಯಂಗೆಯ್ಯುತ್ತಮಿರೆ ◎ ಸ್ವಸ್ತಿ ಸಮಸ್ತಗುಣಸಂಪನ್ನರಪ್ಪ
14 ಶ್ರೀಮತು ಹರಿಶ್ಚಂದ್ರದತ್ತಿಯಗ್ರಹಾರಂ ಬಾಳ್ಗುಳಿಯೂ-
15 ರೊಡೆಯಪ್ರಮುಖಮಹಾಜನಮಯ್ವದಿಂಬರ ಸನ್ನಿಧಾನದೊಳ್
16 ಸ್ವಸ್ತಿ ಶ್ರೀಮಚ್ಚಾಳುಕ್ಯವಿಕ್ರಮವರ್ಷ ೩೩ ನೆಯ ಸರ್ಬ್ಬಧಾ-
17 ರಿಸಂವತ್ಸರದ ಪುಷ್ಯ ಬಹುಳ ೫ ಬೃಹವಾರ ವುತ್ತರಾಯಣ-
18 ಸಂಕ್ರಾನ್ತಿಯಂದು ಕೊಳೆಮೂಕ್ಕ ಪಱಂಬುಗಾದ ಸಮಸ್ತಗುಣಸಂಪನ್ನ-
19 ರಪ್ಪ ಮಲೆಯಾಳವಡ್ಡಬೆವಹಾರಿ ಕೊಮರಮೂರ್ಕ್ಕ ಶ್ರೀಸ್ವಯಂಭುಕ-
20 ಲಿದೇವಸ್ವಾಮಿದೇವರ್ಗ್ಗೆ ನಂದಾದೀವಿಗೆಯ ನಡೆಸುವನಾಗಿ ಶ್ರೀಮ-
21 ತು ಸಿವಸಕ್ತಿಜೀಯರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಮಾಡಿ ಬಿಟ್ಟ ಗ-
22 ದ್ಯಾನವಯ್ದು ಆ ಪೊಂಗೆ ವೃದ್ಧಿಯ ಕೊಣ್ಡು ನಡಸುತ್ತ ಬಪ್ಪರು ಈ ಧ-
23 ರ್ಮ್ಮಮನಯ್ವದಿಂಬರು ಪ್ರತಿಪಾಳಿಸುವರ್ಗ್ಗೆ ಧರ್ಮ್ಮವ ನಡೆಯಿಸಿದವರು ಪ್ರ-
24 ಯಾಗೆ ವಾರಣಾಸಿ ಕುರುಕ್ಷೇತ್ರದೊಳು ಸಾಸಿರ್ಬ್ಬರ್ವ್ವೇದಪಾರಗರ್ಗ್ಗೆ ಸಾ-
25 ಸಿರ ಕವಿಲೆಯನುಭಯಮುಖಿಗೊಟ್ಟ ಫಲಮಕ್ಕುಮಿದ-
26 ನಳಿದಾತನಾ ಪುಣ್ಯಸ್ಥಾನದೊಳನಿತು ಕವಿಲೆಯುಮನನಿಬ-
27 ರು ಬ್ರಾಹ್ಮಣರುಮನಳಿದ ಮಹಾಪಾತಕಮಕ್ಕು ◎
28 ಸ್ವದತ್ತಂ ಪರದತ್ತಂ ವಾ ಯೋ ಹರೇತಿ ವಸುನ್ಧರಾಂ ಷಷ್ಟಿರ್ವರ್ಷ-
29 ಸಹಶ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿ[ಃ*] ◎ ಸರಸ್ವತಿಗ .
30 . ಸಿ ಕೊಳಕರಣ ಕಾಳೆಯ ಬರದ ಕಣ್ಡರಿಸಿದ ಚೆಲು . .

## No. 178.

(*A.R. No.* 104 *of* 1904.)

ON A SLAB SET UP INSIDE THE MALE-MALLAPPA TEMPLE IN THE SAME VILLAGE.

This is damaged and dated **Chālukya-Vikrama year 33, Sarvadhāri, Pushya, ba. 9, Ādityavāra, Uttarāyaṇa-saṅkrānti** corresponding to **A.D. 1108 December 28 Sunday;** f. d. t. .46, Uttarāyaṇa beginning on the 24th of the month. It mentions the Chālukya feudatory, the *Mahāmaṇḍalēśvara* **Tribhuvanamalla Vīra-Pāṇḍyadēva** ruling over **Noḷambavādi thirtytwo-thousand, Vijaya-Pāṇḍyadēva** and the *Mahāpasāyita* **Vijaya-Hemmāḍi-Daṇḍanāyaka.** It records that **Kappiseṭṭi, Honnabāchayya,** the *Sēnabōva* **Padmaṇa, Sarvadēva-Nāyaka, Māhaṇṇa,** the *Sēnabōva* **Saṅkaṇṇa** and others made gifts of various plots of land for the service of the god Divyaliṅga-Nīlēśvara.

1 ನಮಶ್ಶಂಕರಾಯ(ಃ)॥ ಪೂಜ್ಯಾನಾಮಪಿ ಪೂಜ್ಯಾಯ ವೇಧಸಾಮಪಿ ವೇಧಸಾಂ । ಸಮಂ ಚತು-
2 [ರ್ಮುಖ್ಯೈ]ರ್ಗ್ಗೀತಬ್ರಹ್ಮಣೇ ಬ್ರಹ್ಮಣೇ ನಮಃ ।
3 ಸ್ವಸ್ತಿ ಸಮಧಿಗತಪಂಚಮಹಾಶಬ್ದ ಮಹಾಮಣ್ಡಳೇಶ್ವರಂ ಕಾಂಚೀಪುರವರಾಧೀಶ್ವರಂ ಯದುವಂ-
ಶಾಂ-
4 ಬರದ್ಯುಮಣಿ ಸುಭಟಚೂಡಾಮಣಿ ನಿಜಕುಳಕಮಳಮಾರ್ತ್ತಾಣ್ಡ ಪರಿಚ್ಛೇದಿಗಂ-
5 ಡಂ ರಾಚಿಗಚೋಳಮನೋಭಂಗಂ ಶ್ರೀಮತು ಹರಿಹರದೇವಪಾದಾಬ್ಜಭ್ರಿಂಗಂ ನಾಮಾ-
6 ದಿಸಮಸ್ತಪ್ರಶಸ್ತಿಸಹಿತಂ ಶ್ರೀಮನ್ಮಹಾಮಣ್ಡಳೇಶ್ವರಂ ತ್ರಿಭುವನಮಲ್ಲವೀರಪಾ-
7 ಣ್ಡ್ಯದೇವರು ನೊಳಂಬವಾಡಿ ಮೂವತ್ತಿರ್ಚ್ಛಾಸಿರಮುಮಂ ದುಷ್ಟನಿ-
8 ಗ್ರಹಶಿಷ್ಟಪ್ರತಿಪಾಳನಂ ಮಾಡಿ ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ
9 ತತ್ಪಾದಪದ್ಮೋಪಜೀವಿ ॥ ಶ್ರೀವಿಜಯಪಾ[ಣ್ಡ್ಯ]ದೇವ . . .
10 ವಲ್ಲಭನಹಿತಮಣ್ಡಳೇಶ್ವರಕುಳವಿದ್ರಾವಣ . . .
11 ಳಸಿತಬಾಹುದಣ್ಡನಾಹವಶೌಣ್ಡ ॥ ಅರಿನರಪಾಲಮೌಳಿ . . . . . . .
12 ರು ಪಾದಪಂಕೇರುಹನರಾತಿಭೀಕರಕರೀಂದ್ರ . . ಭಿಃ ನ . . . . . . . . .
13 ಶಿರಪಾದಪಯೋರ್ಣ್ಣವಕುಂದಹಾಸಪಾಂಡರನಿಜಕೀರ್ತ್ತಿವರ್ತ್ತಿತಮಹೀವಳಯ ವಿಭುಪಾ . . .
. .
14 ಜ ॥ ತಚ್ಚರಣಾರವಿಂದೋಪಜೀವಿ ॥ ಶ್ರೀವಿಜಯಪಾಣ್ಡ್ಯದೇವಮಹೀ . . . . .
15 ಯುಗಷಚ್ಚರಣಂ ಪಾವನಚರಿತಂ ವಿಶ್ವಮಹೀವರ್ತ್ತಿತವಿಶುದ್ಧಕೀರ್ತ್ತಿ . . ಚಮೂ-
16 ಪ ॥ ದಾಶರಥಿಗಣುವನೆಂತು ಕುಶೇಶಯನಾಭಂಗೆ . . . ನನ್ತಂತೆ ನಿಜಾಧಿಪ . . .
ಗೆ ವಿಜಯ-
17 ಪಾಣ್ಡ್ಯನರೇಶಂಗನುವರ್ತ್ತಿ ಹೆಮ್ಮದಂಡಾಧೀಶ ॥ ಸ್ವಸ್ತಿ ಸಮಸ್ತಪ್ರಶಸ್ತಿಸಹಿತಂ ಶ್ರೀಮನ್ಮಹಾಪ್ರ-
18 ಧಾನಂ ಶ್ರೀಕರಣಂ ಸರ್ವ್ವಾಧ್ಯಕ್ಷಂ ತಂತ್ರಾಧಿಷ್ಠಾಯಕಂ ಮನೆವೆರ್ಗ್ಗಡೆ ಮ-
19 ಹಾಪಸಾಯಿತಂ ವಿಜಯಹೆಮ್ಮಾಡಿದಣ್ಣನಾಯಕರು ಶ್ರೀಮದ್ವಿಜಯ-
20 ಪಾಣ್ಡ್ಯದೇವರ ಮಹಾರಾಜಕಾರ್ಯ್ಯಕ್ರಿಯಾವಿ . . . . . . ಸುಖವಿರಲು ॥
21 ಸ್ವಸ್ತಿ ಯಮನಿಯಮಸ್ವಾಧ್ಯಾಯಧ್ಯಾನಧಾರಣ . . . ಪಾರಾಯಣಜ-
22 ಪಹೋಮಸಮಾಧಿಶೀಳಗುಣಸಂಪನ್ನರಪ್ಪ ಶ್ರೀಮದ್ಧರಿಶ್ಚಂದ್ರದತ್ತಿಯಗ್ರ-
23 ಹಾರಂ ಬಾಳ್ಗುಳಿಯಶೇಷಮಹಾಜನಮಯ್ಯ್ವದಿಂಬರ ಸಧಾನ್ನಿನದಲು ಸ್ವಸ್ತ್ಯನೇಕಗುಣಾಳಂ-
24 ಕಾರಸತ್ಯಶೌಚಾಚಾರಚಾರಿತ್ರನಯವಿನಯಶೀಳಗುಣಸಂಪನ್ನರಪ್ಪ ಶ್ರೀಮತು ಕು-
25 . . ಪಂಶಾನ್ವಯಾರಪ್ಪ ಶ್ರೀಮನ್ಮಹಾಪಸ್ತ್ರಬ್ಯವಹಾರಿ ಚಿನ್ನಗೆಯಿ ಕಪ್ಪಿಸೆಟ್ಟಿಯರು ಸ್ವಸ್ತಿ ಶ್ರೀ
26 . . . ವಿಕ್ರಮವರ್ಷದ ೩೩ ನೆಯ ಸರ್ವ್ವಧಾರಿಸಂವತ್ಸರದ ಪುಷ್ಯ ಬ ೯ಮಿ ಆದಿವಾರ-
27 ದಂದಿನ ಉತ್ತರಾಯಣಸಂಕ್ರಾನ್ತಿಯಂದು ಭಕ್ತಜನಚಿನ್ತಾಮಣಿಯಪ್ಪ ಶ್ರೀಮದ್ದಿಬ್ಯಲಿಂಗಂ ನೀ-
ಲೇಶ್ವರದೇವರ್ಗ್ಗೆ ನಾಗರಾಶಿಪಣ್ಡಿತರ
28 ಕಾಲಂ ಕರ್ಚ್ಚಿ ಧಾರಾಪೂರ್ಬ್ಬಕಂ ಮಾಡಿ ಕಂಚಮೆಯಗೆಱೆಯ ಗರ್ದ್ದೆ ಅಶಾಪನಿತುಮಂ ಬಿಟ್ಟಂ

29 . . ಸಮಸ್ತವಸ್ತುಗಣಸಂಪನ್ನರಪ್ಪ ಶ್ರೀಮತು ಅಯ್ವದಿಂಬರ ಪುತ್ರ ಹೊನ್ನಬಾಚಯ್ಯ ಬಿಟ್ಟ ಬೆಗೆಯರ ಕೆಱೆಯ

30 ಗರ್ದ್ದೆ ಕಮ್ಮ ನೂಱಯ್ವತ್ತು ಮತ್ತವಂ ಕಲಿದೇವ ಮೂಡೆಯಕಟ್ಟದ ಗರ್ದ್ದೆ ಕಮ್ಮ ನೂಱು ಮತ್ತಂ ಸಮಸ್ತವಸ್ತು-

31 ಗುಣಗಣಾಳಂಕಾರ ಚಾರುಚಾರಿತ್ರನಯವಿನೆಯಶೀಲಾಚಾರಸಂಪನ್ನರಪ್ಪ ಶ್ರಿಮತು ಸೇನಬೋ-

32 ವ . . ಣ್ಣಂಗಳ ಪುತ್ರ ಸೇನುಬೋವ ಪದ್ಮಣನು ಬಿಟ್ಟ ಮೂಡೆಯಕಟ್ಟದ ಗರ್ದ್ದೆ ಕಮ್ಮ ೧೦೦ ಮತ್ತಂ ಅಣ್ಣರ್ಮಾಳೆ-

33 ಯಷಣಂಗಿಯರ ಶರ್ವ್ವದೇವನಾಯಕನು ಬಿಟ್ಟ ಮೂಡೆಯಕಟ್ಟದ ಕಮ್ಮ ೧೦೦ ಮತ್ತಂ ಹುರುವಳ-ಯ ಚಿಕ್ಕಣ-

34 ನು ಮೂಡೆಯಕಟ್ಟದೆ ಗದ್ದೆ ಕಮ್ಮ ೭೦ ಮತ್ತಂ ಎಂಜಬೆಯ ಮಾಹಣ್ಣನು ಬಿಟ್ಟ ಕಪ್ಪುರಗೆಱೆಯ ಗದ್ದೆ ಕಮ್ಮ ೧೭೦ ಮತ್ತಂ

35 ಕುಱುವೆತ್ತಿಯ ಈಶ್ವರಭಟ್ಟರ ಪುತ್ರಂ ಸೇನುಬೋವ ಸಂಕಣ್ಣನು ಬಿಟ್ಟ ಹೂವಿ(ಂ)ನ ತೋಂಟದ ಎರೆ ಕಮ್ಮ೬ಂ

36 ಕಂಚವ್ವೆಯಗೆಱೆಯ ಗರ್ದ್ದೆಯಲ್ಲಿ ಬಡಗಿ ರೆಬ್ಬೋಜಗೆ ಬಡಗಿಗದ್ದೆಯಾಗಿ ಕೊಟ್ಟ ಗದ್ದೆ ಕಮ್ಮ ೫೦ ಈ ಧರ್ಮ್ಮಮಂ

37 ಪ್ರತಿಪಾಳಿಸಿದವರ್ಗ್ಗೆ ಪ್ರಯಾಗೆ ವಾರಣಾಸಿ ಗುರೂಕ್ಷೇತ್ರದೊಳ್ಪಾಸಿರ್ಬ್ಬರ್ವ್ವೇದಪಾರಗರ್ಗ್ಗೆ ಸಾಸಿರ್ಬ್ಬ

38 ಕಪಿಲೆಯನುಭಯಮುಖಿಗೊಟ್ಟ ಫಳಮಕ್ಕು ಈ ಧರ್ಮ್ಮಮನಳಿವಾತನಾಸ್ಥಾನದೊಳನಿತು ಕವಿಲೆಯ್ಮ-ನಾ ಬ್ರಾಹ್ಮಣ-

39 ರುಮನಳಿದ ಮಹಾಪಾತ[ಕ*]ನಕ್ಕು ॥ ಸ್ವದತ್ತಂ ಪರದತ್ತಂ ವಾ ಯೋ ಹರೇತಿ ವಸುನ್ಧರಾ[ಂ] ಷಷ್ಟಿರ್ವ್ವರ್ಷಸಹಸ್ರಾಣಿ

40 ವಿಷ್ಠಾಯಾಂ ಜಾಯತೇ ಕ್ರಿಮಿ [಼*] ೑

## No. 179.

(*A.R. No.* 410 *of* 1920.)

ON A STONE PRESERVED IN THE TALUK OFFICE AT URUVAKONDA, GOOTY TALUK, ANANTAPUR DISTRICT.

This is dated **Chālukya-Vikrama year 34, Virōdhin, Uttarā[yaṇa-saṅkrānti]**, corresponding probably to **A.D. 1109 December 25.** (The date is not verifiable). It refers itself to the reign of the Chālukya king **Tribhuvanamalladēva** and mentions a feudatory belonging to the **Chōḷa** family (name lost) ruling over **Kaṇiyakallu.** A certain *Perggaḍe* (name lost) is stated to have made a gift of land for the service of the gods Siddhēśvaradēva and Mallikārjunadēva. The record is damaged.

1 ಸ್ವಸ್ತಿ [॥*] ಸಮಸ್ತಭುವನಾಶ್ರಯ ಶ್ರೀ-

2 ಪ್ರಿಥ್ವೀವಲ್ಲಭ ಮಹಾರಾಜಾಧಿರಾ-

3 ಜ ಪರಮೇಶ್ವರ ಪರಮಭಟ್ಟಾರಕಂ ಸ-

4 . . ಯಕುಳತಿಳಕಂ ಚಾಳುಕ್ಯಾಭ

5 . . ಶ್ರೀತ್ರಿಭುವನಮಲ್ಲದೇವರ . .

6 . . ಜ್ಯಮುತ್ತರೋತ್ತರಾಭಿವೃದ್ಧಿಪ್ರವ . .

7 . . ದ್ರಾರ್ಕ್ಕತಾರಂಬರಂ ಸಲುತ್ತಮಿ-ರೆ . . .

8 [ತತ್ಪಾ]ದಪದ್ಮೋಪಜೀವಿ ಸ್ವಸ್ತಿ ಚೆರ-ಣಸ . . .

9 ವಿಹತವಿಳೋಚನತ್ರಿಳೋಚನ ತ್ರಿ . . .

10 ಪ್ರಿಥ್ವೀಶ್ವರಕಾರಿತಕಾವೇರೀತೀರ

11 ರತ್ನಪ್ರದೀಪಾಹಿತಕುಮಾ . . .

12 ಹಾಮಣ್ಣಾಳೇಸ್ವರ ಘಟಿಯಂಕ . .

13 . . . ರಾಜರು ಕಣಿಯಕಲು ವ . . .

14 . . . ಖದಿನಾಳುತ್ತಮಿರೆ ಕುಮಾರ
. . . .
15 . . ಪೆರ್ಗ್ಗಡೆ ಪೊಳಲ . . .
ಯುಮು .
16 ಪುರದ ಸಿದ್ಧೇಶ್ವರದೇವರ್ಗ್ಗಂ . . .
17 . . ೩೮ ನೆಯ ವಿರೋಧಿಸಂವತ್ಸರದು-
[ತ್ತರಾ] . . .
18 . . ವ್ಯತೀಪಾತದೆಂದು ಮಲ್ಲಿಕಾರ್ಜುನ
. . . .
19 . . . ವಣಗು . ಕೆಯ . ಯಿಂ
[ತೆಂ]ಕ . . .
20 . . ಧಾರಾಪೂರ್ವ್ವಕಂ ಮಾಡಿ ಬಿಟ್ಟ
ಕರಿಯ . . .
21 . . ಆದಿತ್ಯದೇವರ್ಗ್ಗೆ ನಾಕಮಯ್ಯಂ-
ಗೆ . . .
22 . . . . ಪೂಜಾರಿ ನೇಮಣ್ಣಂಗೆ
ಮತ್ತ . . .
23 ಗೆರಿಂ ಯೇಚಮಯ್ಯಂಗೆ ಬಿಟ್ಟ ಮತ್ತ-
ರು ೧ ಗಾ . . .
24 . . . . . . . . . .
ಲಿಪಗೆ . . .
25 ಪ್ರತಿಪಾಲಿಸಿದವರು ಗಂಗೆ ವಾರಣಾಸಿ ಕು-
ರು . . .
26 . . . . ಸಾಸಿರ್ವ್ವರ್ ಬ್ರಾಹ್ಮಣ-
ರ್ಗ್ಗಂ ಸಾಸಿರ್ವ್ವರು ತಪೋಧ .
. .
27 ಫಳಮಕ್ಕು ಇನ್ತೀ ಧರ್ಮ್ಮಮನಳಿದಾ . .
28 . . . . ದ ಮಹಾಪಾತಕನಕ್ಕು ॥
ಸಾಮಾನ್ಯೋಯಂ . . . .
. .
29 . . ಕಾಲೇ ಕಾಲೇ ಪಾಲನೀಯೋ
ಭವದ್ಭಿಃ ಸರ್ವ್ವಾನೇ . . .
30 . . . . ಭೂಯೋ ಭೂಯೋ ಯಾ-
ಚತೇ . . .
31 . . ಪರದತ್ತಂ ವಾ ಯೋ ಹರೇತಿ ವಸು
. . .
32 ಹಸ್ರಾಣಿ ಮಿಷ್ಟಾಯಾಂ ಜಾ . . . .

## No. 180.

(*A.R. Nó.* 451 *of* 1914.)

ON A MUTILATED STONE IN FRONT OF DABBAGUDI AT SOGI, HADAGALLI TALUK, BELLARY DISTRICT.

This is damaged and the date is partly lost. The preserved portion of it is **Chālukya-Vikrama year 35....13, Ādivāra** (A.D. 1110). It refers itself to the reign of the Chālukya king **Tribhuvanamalladēva** whose feudatory **[Tribhuvana]malla-Pāṇḍyadēva** is stated to have been ruling over **Noḷambavāḍi thirtytwo-thousand.** The *Daṇḍanāyakas* **Nāgavarmayya-Nāyaka** and **Mahādēvayya** of Sōge appear to have made a gift of land.

1 ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರ . . . . . . . . . .
2 ಭಾಯ ಸಂಭವೇ [॥*]
3 ಸ್ವಸ್ತಿ ಸಮಸ್ತಭುವನಾಶ್ರಯಂ ಶ್ರೀಪ್ರಿಥ್ವೀವಲ್ಲ . . . . . . . . . .
4 ರಮಭಟ್ಟಾರಕಂ ಸತ್ಯಾಶ್ರಯಕುಳತಿಳಕಂ ಚಾ . . . . . . . . . .
5 ಮಲ್ಲದೇವರ ವಿಜಯರಾಜ್ಯಮುತ್ತರೋತ್ತರಾಭಿ . . . . . . . . . .
6 ತಾರಂಬರಂ ಸಲುತ್ತಮಿರೆ। ಕಲ್ಯಾಣದ ನೆಲೆವೀಡಿ . . . . . . . . . .
7 ಜ್ಯಂಗೆಯ್ಯುತ್ತಮಿರೆ ॥ ತತ್ಪಾದಪದ್ಮೋಪಜೀವಿ . . . . . . . . . .
8 ಮಣ್ಡಳೇಶ್ವರಂ . . . . . . ಕಾಂಚೀಪುರವ . . . . . . .
9 ಸುಭಟಚೂಡಾಮಣಿ ನಿಜಕುಳಕಮಳಮಾ . . . . . . . . .
10 ಗಂ ಶ್ರೀಮತ್ತ್ರಿಭುವನಮಲ್ಲದೇವಪಾದಾಬ್ಜಭ್ರಿ . . . . . . . . .
11 ಮಲ್ಲಪಾಣ್ಡ್ಯದೇವರು ನೊಳಂಬವಾಡಿ ಮೂವತ್ತಿಚ್ಛಾ . . . . . . . . .
12 ತಿಪಾಳನದಿನಾಳುತ್ತಮಿರೆ ॥ ಸ್ವಸ್ತಿ ಸಮಧಿ . . . . . . . . .
13 ರುಂ ವಿಬುಧಜನಮನಸ್ಸರೋಜಿನೀರಾಜಹಂಸ . . . . . . . .
14 . . . ತಾಪರಮಶಿವಪದಾಂಭೋಜಭ್ರಿಂಗರುಂ . . . . . . . . .
15 . . . . ಚಾರುಚಂದ್ರಪ್ರಭರುಂ ವತ್ಸ . . . . . . . . . .

16 ಕ್ಷರು । ಗೋತ್ರಪವಿತ್ರರು । ಪರಾಂಗನಾಪು . . . . . . . . .
17 ಪಾದಾಬ್ಜಭೃಂಗರುಂ ನಾಮಾದಿಸಮಸ್ತಪ್ರ . . . . . . . . . .
18 . ಸೋಗೆಯ ನಾಗವರ್ಮ್ಮಯ್ಯನಾಯಕರು . . . . . . . . .
19 . ಮವರಿಂ ಕಿಱಿಯ ಮಹಾದೇವಯ್ಯನಾಯಕ . . . . . . . . . .
20 ಸ್ವಸ್ತಿ ಶ್ರೀಚಾಳುಕ್ಯವಿಕ್ರಮವರ್ಷದ ೩೫ ನೆಯ . . . . . . . . .
21 ದ್ಧ ೧೧ದಸಿ ಆದಿವಾರದಂದು . . . . . . . . .
22 . . . ದೇವ ಎಱೆಯ . . . . . . . . . . .

## No. 181.

(*A.R. No.* 114 *of* 1913.)

ON A SLAB SET UP IN THE COURT-YARD OF THE BHIMESVARA TEMPLE AT NILAGUNDA, HARPANAHALLI TALUK, SAME DISTRICT.

This is dated **Chālukya-Vikrama year 35** (current), **Vikṛita, Bhādrapada, ba. 11, Ādivāra, Uttarāyana-Saṅkrānti** (error) corresponding to **A.D. 1110 September 11 Sunday,** in the reign of the Chālukya king **Tribhuvanamalladēva** who was ruling from **Kalyāṇa.** His *Daṇḍanāyakas,* **Anantapālayya** and **Muddarasa** who were in charge of the toll-revenue, made a gift of a portion of the tolls for the service of the god Bhīmēśvaradēva at **Nīrgunda.** The record is damaged.

1 ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ । [ತ್ರೈಳೋಕ್ಯನ]ಗರಾರಂಭ[ಮೂಲ]ಸ್ತಂಭಾಯ ಶಂಭವೇ ॥
2 ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀಪ್ರಿಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾ-
3 ರಕಂ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ ಶ್ರೀಮತ್ತ್ರಿಭುವನಮಲ್ಲದೇವರ ವಿಜಯ-
4 ರಾಜ್ಯಮುತ್ತರೋತ್ತರಾಭಿವ್ರಿದ್ಧಿಪ್ರವರ್ದ್ಧಮಾನಮಾಚಂದ್ರಾರ್ಕ್ಕತಾರಂಬರಂ ಸಲುತ್ತ-
5 ಮಿರೆ ಕಲ್ಯಾಣದ ನೆಲೆವೀಡಿನೊಳು ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ
6 ಸ್ವಸ್ತಿ ಸಮಧಿಗತಪಂಚಮಹಾಶಬ್ದ ಮಹಾಸಾಮನ್ತಾಧಿಪತಿ [ಮಹಾ]ಪ್ರಚ[ಣ್ಡ]-
7 ದಣ್ಡನಾಯಕ ವಿಬುಧವರದಾಯಕ ಸುಜನಪ್ರಸನ್ನಂ ನುಡಿದು ಮತ್ತೆನ್ನಂ ಗೋತ್ರಪವಿತ್ರಂ
8 ಪರಾಂಗನಾಪುತ್ರಂ . . . . . . . ವೈರಿಕ್ರಿತಾಂತಂ ಸಾಹಸೋತ್ತುಂಗನಯ್ಯನಸಿಂಗಂ ನಾ-
9 ಮಾದಿಸಮಸ್ತಪ್ರಶಸ್ತಿಸಹಿತಂ ಶ್ರೀಮನ್ಮಹಾಪ್ರಧಾನಂ ಭಾಣಸವೆರ್ಗ್ಗಡೆ ದಣ್ಡನಾ-
10 ಯಕ ಅನನ್ತಪಾಲಯ್ಯಂಗಳು ಸಮಸ್ತ . . . ಯದ ಸುಂಕಮಂ ಸುಖದಿನಾಳುತ್ತಮಿ-
11 ರಲು ॥ ಸ್ವಸ್ತಿ ಸಮಸ್ತರಾಜ್ಯಭರನಿರೂಪಿತಮಹಾಮಾತ್ಯಪದವೀವಿರಾಜಮಾ-
12 ನಮಾನೋನ್ನತಪ್ರಭು[ಮಂತ್ರೋತ್ಸಾಹಶಕ್ತಿ]ತ್ರಯಸಂಪನ್ನರಪ್ಪ ಶ್ರೀಮನ್ಮಹಾ-
13 ಪ್ರಧಾನಂ ಪನ್ನಾಯದಧಿಷ್ಠಾಯಕಂ ದಣ್ಡನಾಯಕಂ ಮುದ್ದರಸರು ಕಿರ್ಬಟ್ಟೆಯ ಸುಂಕಮಂ
14 ಸುಖಸಂಕಥಾವಿನೋದದಿಂದಾಳುತ್ತಮಿರೆ । ಸ್ವಸ್ತಿ ಶ್ರೀಮಚ್ಚಾಳುಕ್ಯವಿಕ್ರ-
15 ಮಕಾಲದ ೩೫ ನೆಯ ವಿಕ್ರಿತಸಂವತ್ಸರದ ಭಾದ್ರಪದ ಬಹುಳ ಏಕಾದಸಿ ಆದಿತ್ಯ-
16 ವಾರ ಉತ್ತರಾಯಣಸಂಕ್ರಾಂತಿ ವ್ಯತೀಪಾತದಂದು ಕೋಗಳಿಯಯ್ನೂಱು ಕಂಪಣಂ
17 ಬಿಕ್ಕಿಗನೆಪ್ಪತ್ತಱ ಮೊದಲ ಕಂಪಣಂ ಶ್ರೀಮದಗ್ರಹಾರಂ ನೀರ್ಗುಂದದ ಉತ್ತ-
18 ರದಿಸಾಭಾಗದ ಶ್ರೀಸ್ವಯಂಭುಭೀಮೇಸ್ವರದೇವರ್ಗ್ಗೆ ನಂದಾದೀವಿಗೆಗಂ
19 ನಿವೇದ್ಯಕ್ಕಂ ಅಲ್ಲಿಯ ಸ್ಥಳದಲು ಕಾ . . . ಎಲೆಯ ಹೇಱು ತಿಂಗಳಿಂಗೆ ಒಂ-
20 ದುಮಂ ಬಿಟ್ಟರು ॥ ಈನ್ತೀ ಧರ್ಮ್ಮಮಂ ಪ್ರತಿಪಾಳಿ[ಸಿ*]ದವಂ ವಾರಣಾಸಿ ಅರ್ಘ್ಯತೀರ್ತ್ಥ ಕುರು-
21 ಕ್ಷೇತ್ರ ಪ್ರಯಾಗೆತೀರ್ತ್ಥವಿನಿತಱಲು ವೇದಪಾರಗರಪ್ಪ ಸಾಸಿರ್ವ್ವರು ಬ್ರಾಹ್ಮಣರ್ಗ್ಗೆ
22 ಸಾಯಿರ ಕವಿಲೆಯ ಕೋಡುಮಂ ಕೊಳಗುಮಂ ಪಂಚರತ್ನದಲು ಕಟ್ಟಿಸಿ ಕೊಟ್ಟ ಫ-
23 ಳಮನೆಯ್ದುವರು । ಈ ಧರ್ಮ್ಮಮನಾವನೊರ್ವ್ವಂ ಕಿಡಿಸಿದವಂ ವಾರಣಾಸಿ ಕುರು-
24 ಕ್ಷೇತ್ರ ಪ್ರಯಾಗೆ ಅರ್ಘ್ಯತೀರ್ತ್ಥಂಗಳೊಳು ಸಾಸಿರ್ಬ್ಬರು ಬ್ರಾಹ್ಮರಣುಮಂ ಕವಿ-
25 ಲೆಯುಮಂ ವಧಿಯಿಸಿದ ದೋಸಮನೆಯ್ದುವರು । ಸ್ವದತ್ತಂ ಪರದತ್ತಂ ವಾ
26 ಯೋ ಹರೇತ ವಸುನ್ಧರಾ[ಂ*] । ಶಷ್ಟಿರ್ವ್ವರಿಷಸಹಸ್ರಾಣಿ ವಿಷ್ಟಾಯಾ[ಂ*] ಜಾಯತೇ ಕ್ರಿಮಿ[ಃ*] ॥

## No. 182.

(*A.R. No.* 104-*A of* 1904.)

ON A SLAB SET UP INSIDE THE MALE-MALLAPPA TEMPLE AT BAGALI, SAME TALUK AND DISTRICT.

This is dated in the **8 th year** of the *Mahāmaṇḍalēśvara* **Vijaya-Pāṇḍyadēva Vikṛita, Mārgaśira, ba. 5, Ādivāra Uttarāyaṇa-Saṅkrānti, Vyatīpāta,** corresponding probably to **A.D. 1110 December 3 Saturday** (not Sunday) Uttarāyaṇa-sankrānti falling on the 25th of the month. The *Sēnabōva* Saṅkaṇa is stated to have made a gift of 40 *kammas* of garden land for the service of god Nīlēśvara, after washing the feet of **[Nā]garāśi-Paṇḍita.**

1 ಸ್ವಸ್ತಿ [||*] ಸಮಸ್ತಪ್ರಶಸ್ತಿಸಹಿತಂ ಶ್ರೀಮನ್ಮಹಾಮಂಡಳೇಶ್ವರಂ ವಿಜಯಪಾಣ್ಡ್ಯದೇವರ ೮ ನೆಯ ವಿಕ್ರಿತಸಂವತ್ಸ-
2 ರದ ಮಾರ್ಗ್ಗಶಿರ ಬಹುಳ ೫ ಆದಿವಾರದಂದು ಉತ್ತರಾಯಣಸಂಕ್ರಾನ್ತಿ ವ್ಯತೀಪಾತಂ ಕೂಡಲು
3 ಶ್ರೀಮದಯ್ವದಂಬರ ಪ್ರಿಯಪುತ್ರನಪ್ಪ ಸೇನಬೋವ ಸಂಕಣ ಶ್ರೀಮದ್ದಿವ್ಯಲಿಂಗಂ ನೀಲೇ[ಶ್ವ]-
4 ರದೇವರಂಗಭೋಗನಿವೇದ್ಯಕಂ ನಂದಾದೀವಿಗೆಗಂ ಶ್ರೀಮದಯ್ವದಿಂಬರ ಸನ್ನಿಧಾನದೊಳು
5 . . ರಾಸಿಪಂಡಿತರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಮಾಡಿ ಬಿಟ್ಟ ಹೊಸವಸುಗೆಯ
6 . . . . ವಿನ ಮೂಡಲ ತೋಂಟ ಕಮ್ಮ ೪೦ ಸಮಸ್ತವಸ್ತುಗುಣಸಂಪ . . . .
7 . . . ಸೇನಬೋವ ಹೊನ್ನಬಾಚಯ್ಯ ಶ್ರೀಹೊನ್ನದೇವಿಯ . . . .
8 . . . [ನೈ]ವೇದ್ಯಕ್ಕಂ ನಂದಾದೀವಿಗೆಗಂ ಬಿಟ್ಟ ಹನ್ನಾಸಿ . . . . .
9 . . . . ಮತ್ತರು ೧ ಕಮ್ಮ ೧೦೦ ಕೊಡಗದ . . . ದೇವನು[1] . . . . . .

## No. 183.

(*A.R. No.* 459 *of* 1914.)

ON A SLAB SET UP IN FRONT OF A HOUSE, SOUTH OF THE KALLESVARA TEMPLE AT SOGI, HADAGALLI TALUK, SAME DISTRICT.

This is damaged and dated **Chālukya-Vikrama year 35, Vikṛita, Pushya, śu. 13, Ādivāra, Uttarāyaṇa-saṅkrānti, Vyatīpāta** corresponding to **A.D. 1110 December 25 Sunday.** It refers itself to the reign of the Chāḷukya king **Tribhuvanamalladēva.** It states that the *Daṇḍādhipati* **Muddarasa** or Muddarāja made some grant for the tank Nāgasamudra near **Sōge.**

1 ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ [ತ್ರೈಳೋಕ್ಯನ]ಗರಾರಂಭ[ಮೂಲ]-
2 ಸ್ತಂಭಾಯ [ಶಂಭವೇ] ||
3 ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀಪ್ರಿಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವ .
4 ಪರಮಭಟ್ಟಾರಕ ಸತ್ಯಾಶ್ರಯಕುಳತಿಳಕ ಚಾಳುಕ್ಯಾಭರಣ ಶ್ರೀಮತ್ತ್ರಿಭು-
5 ವನಮಲ್ಲದೇವರ ವಿಜಯರಾಜ್ಯಮುತ್ತರೋತ್ತರಾಭಿ[ವೃದ್ಧಿ][ಪ್ರವ[ರ್ದ್ಧಮಾನಮಾ] -
6 ಚಂದ್ರಾರ್ಕ್ಕತಾರಂಬರಂ ಸಲುತ್ತಮಿರೆ ಕ . . . . . . . . . . .
7 ದದಿಂ ರಾಜ್ಯಂಗೆಯ್ಯುತ್ತಮಿರೆ ತ . . . . . . . . . .
8 . ಸಾಮನ್ತಾಧಿಪತಿ . . . . . . . . .
9 . . . ಸನ್ನಂ ನುಡಿದುಮತ್ತನ್ನಂ ಗೋತ್ರ . . . . . . .
10 ಸಾಹಸೋತ್ತುಂಗ . . . . . . . . . .
11 . . . . . . . . . .
12 . . . . . ದಾಳುತ್ತಮಿರಲು || ಸ್ವಸ್ತಿ ಸಮ . . . . . . .
13 . . . ಮಾನಮಾನೋನ್ನತಪ್ರಭುಮಂತ್ರೋತ್ಸಾಹ . . . . . . . . . . .
14 . . . . . ನಾರಾಯಣ . . . . ಸಾಸ್ತ್ರ . . . . . . . . . .
15 . . . . . . . . . . .

---

[1] Three more lines are effaced.

16 . . . . ಶ್ರೀಮದಮಾ . . . . . . .
17 . . ನೊಳಂಬವಾಡಿ ಮೂವತ್ತಿರ್ಚ್ಛಾಸಿರಮುಮಂ . . . . . . . . . . .
18 ಕ್ರಮಕಾಳದ ೩೫ ನೆಯ ವಿಕ್ರಿತಸಂವತ್ಸರದ ಪುಷ್ಯ ಸುದ್ಧ ತ್ರಯೋದಸಿ ಆದಿವಾರದನ್ದುಉತ್ತರಾ-
19 ಯಣಶಂಕ್ರಾನ್ತಿ ವ್ಯತೀಪಾತಮು ನಿಮಿತ್ತಮಾಗೆ ಸೋಗೆಯ ಬಳಿಯ ಕೆಱೆ ನಾಗಸಮುದ್ರಕ್ಕೆ ತವಗೆ
20 . . . ಯಡಕೆಯ ಸುಂಕದೊಳ್ . . . . . . . . . . ಜನಕ . . .
21 . . . . . . . . . . . . ಪರಬಲ . . . . . . . . . . .
22 . . . . . . . . . . . . ಯನು ಸಾ
23 . . . . . . . . . . . . ರಾಜನಂ ಜಯಲಕ್ಷ್ಮೀಲಕ್ಷಿತಂ ದಕ್ಷಿಣ
24 . . . . . . . . . . . . ಕುಲೋದ್ಭವವಿಭವಜಿತಂ ಮೂರ್ತ್ತಿ
25 . . . . . . . . . . [ವಿ]ದ್ವಜ್ಜನಂ ಬಣ್ಣಿಸೆ . . . ಸುರೋರ್ವ್ವಿಜಸಂಪತ್ತಿ
ಯಂ ತನ್ನ
26 . . . . ಪ್ರೌಢಿ[ಯಂ] ಕೇಳ್ದಡಸಿ ನೆಗರ್ದ್ದ ದಣ್ಡಾಧಿಪಂ ಮುದ್ದರಾಜಂ ಧರೆಯುಂ ಶ್ರೀ . .
27 . . ಮುಮಂ ವೀರಮಹೇಶ್ವರಮಾನಿಸ . . . . ಮುದ್ದರಸಂಗಿಷ್ಟಾರ್ತ್ಥಂ . . .
ಯ ನೊದವಿಸು
28 . . . ದಾನಮ್ಮೆ . . . . . . . . ಚನ್ದ್ರೌಳಿಮಾಳೋತ್ಕರನಧಿಕ . . . ನಡೆದು
. . .
29 . . . . . . . . . . . ದೆವರ್ಗೆ ವಾರಣಾಸಿ ಕುರುಕ್ಷೇತ್ರ ಪ್ರಯಾ-
30 ಗೆ ಅರ್ಗ್ಘ್ಯತೀರ್ತ್ಥಮೆಂಬ . . . . . ಗಳೊಳ್ [ಸಾ]ಯಿರ ಕವಿ[ಲೆ]ಗಳ ಕೋಡುಂ ಕೊಳಗುಂ-
ಗಳ್ಗಂ-
31 ಮಂ ಪೊನ್ನೊಳಂ ಪಂಚರತ್ನದೊಳಂ ಕಟ್ಟಿಸಿ ಸಾಸಿ[ರ್ವ್ವ]ರ್ವ್ವೇ . . ರಪ್ಪ ಬ್ರಾ . . . .
32 [ಭ]ಯಮುಖಿಗೊಟ್ಟ ಫಳಮಕ್ಕು ಈ ಧರ್ಮ್ಮಮ . . . . . . . .
33 ಕ್ಷೇತ್ರ ಪ್ರಯಾಗೆ ಅರ್ಘ್ಯತೀರ್ತ್ಥಂಗಳೆಂಬ ಪು . . [ರ್ತ್ಥಂಗಳೊಳು] ಸಾಯಿರ ಕವಿ-
34 ಲೆಯುಮಂ [ಸಾಸಿ]ರ್ವ್ವರ್ ವೇದಪಾರಗ . . ಬ್ರಾಹ್ಮಣರುಮಂ ಸಾಸಿರ್ವ್ವ-
35 ರ್ ತಪೋಧನರುಮನಳಿದ ಮಹಾಪಾತಕ[ನಕ್ಕು] ॥ ಸ್ವದತ್ತಂ ಪರದತ್ತಂ ವಾ ಯೋ
36 ಹರೇತಿ ವಸುಂಧರಾಂ ಷಷ್ಟಿರ್ವ್ವರ್ಷಸಹಶ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿ[ಃ*] ।
37 ನ ವಿಷಂ ವಿಷಮಿತ್ಯಾಹುರ್ದ್ದೇವಸ್ವಂ ವಿಷಮುಚ್ಯತೇ । ವಿಷಮೇಕಾಕಿನಂ ಹನ್ತಿ
38 ದೇವಸ್ವಂ ಪುತ್ರಪೌತ್ರಿಕಂ ॥

## No. 184.

(*A.R. No.* 278 *of* 1925.)

ON A SLAB SET UP IN THE RAMESVARA TEMPLE AT HANSI, KUDLIGI TALUK, SAME DISTRICT.

This is damaged and dated **Chālukya-Vikrama year 35 . . . . . Śrāvaṇa, śu. 5, Sōmavāra** probably corresponding to **A.D. 1111 July 12** ; Sōmavāra may be a mistake for Saumyavāra. It refers itself to the reign of the Chāḷukya king **Tribhuvanamalladēva** and mentions his feudatory **Tribhuvanamalla-Pāṇḍyadēva** ruling over **Noḷambavāḍi thirty two-thousand.** It records the grant of some land and a portion of toll-revenue by the *Mahāsāmanta* **Hoḷḷeya** for the service of the god Paraśu-rāmēśvara of **Hanase** in **Kōgaḷi five-hundred,** for the feeding of ascetics and for education. The writer was the *Sēnabōva* **Sōmanāthayya** and the engraver the bronze-smith **Kāsōja.**

1 . . . . ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀಪ್ರಿಥ್ವೀ . . . .
2 ಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ ಸತ್ಯಾಶ್ರಯಕುಳತಿಳಕ . . . . .
3 ಶ್ಚಾಳುಕ್ಯಾಭರಣ ಶ್ರೀಮತ್ತ್ರಿಭುವನಮಲ್ಲದೇವರ ವಿಜಯರಾಜ್ಯಮು . . . .
4 . . . . ಪ್ರವರ್ದ್ಧಮಾನಮಾಚಂದ್ರಾರ್ಕ್ಕತಾರಂಬರಂ ಸಲುತ್ತಮಿರೆ ತತ್ಪಾ
5 . . . . ಜೀವಿ ಸಮಧಿಗತಪಂಚಮಹಾಶಬ್ದ ಮಹಾಮಣ್ಡಳೇಶ್ವರ ಕಾಂಚೀ
6 . . . . ಯದುವಂಶಾಂಬರದ್ಯುಮಣಿ ಸುಭಟಚೂಡಾಮಣಿ ನಿಜ .
7 . . . . ಮಾರ್ತ್ತಣ್ಡ ಪರಿಚ್ಛೇದಿಗಣ್ಡ ರಾಜಿಗಚೋಳಮನೋಭಂಗ ಶ್ರೀ
8 . . ವನಮಲ್ಲದೇವಪಾದಾಬ್ಜಭ್ರಿಂಗ ಶ್ರೀಮನ್ಮಹಾಮಣ್ಡಳೇಶ್ವರ ತ್ರಿಭುವನ-
9 . . ಪಾಣ್ಡ್ಯದೇವರು ನೊಳಂಬವಾಡಿ ಮೂವತ್ತಿರ್ಚ್ಛಾಸಿರಮಂ ಸುಖ[ಸಂಕಥಾ]ವಿನೋದ-

10 . . . . . . . ಮಿರೆ ॥ ಸ್ವಸ್ತಿ ಸಮಧಿಗತಪಂಚಮಹಾಶಬ್ದ ಮಹಾಸಾಮನ್ತ . .
11 . . . . ಸಮಸ್ತದುಷ್ಟಾರಾತಿಕಾಳಾನಳ ವಿರೋಧಿಬಳಜಳಧಿಬಡವಾ
12 . . . . . . . . . ಮುರಾರಿ ಪಗೆವರಮಾರಿ ಪೊಣಬ್ಬ(ಿ)ರ ಭೀಮ ಚಲದಂಕರಾ . . .
13 . . . . . . ಮಲೆವ ದಾಯಿಗರಂ ಬೆಂಕೊಳ್ವ ಕೂಡಿತಪ್ಪುವ ನಾಯಕ . . . .
14 . . . ಪ್ರಚಣ್ಡದಾಯಿಗಪರಬಾಧಕದಳ್ಳೇವನಕುಂಜರ ಸ . . . . .
15 . . . . ತುಂಗರೇವನ್ತ ವೈರಿಕೃತಾಂತ ದಾಯಂಗಮೃಗ . . .
16 . . . . . . . . ಶ್ರೀಪರಸುರಾಮೇಶ್ವರದೇವಲಬ್ಧವರಪ್ರಸಾದ ಮೃಗ . .
17 . . . . ಘಟ್ಟಿಯಂಕಕಾಱ . . . ಮಲ್ಲನ ಸಿಂಹ ಸಾಹ . .
18 . . . . ಮಾದಿಸಮಸ್ತಪ್ರಶಸ್ತಿಸಹಿತಂ ಶ್ರೀಮನ್ಮಹಾಸಾಮನ್ತ ಹೊ-
19 [ಳ್ಳೈ]ಯಂ ಸ್ಥಿರಂ ಜೀಯಾತ್ [॥*] ಸ್ವಸ್ತಿ ಶ್ರೀಮಚ್ಚಾಳುಕ್ಯವಿಕ್ರಮಕಾಲ ೩೭ ನೆಯ ವಿ
20 . . . . ವತ್ಸರದ ಶ್ರಾವಣ ಶುದ್ಧ ೫ ಮ ಸೋಮವಾರದಂದು ಕೋಗಳಿಯ-
21 [ಯ್ದ]ಱ ಬಳಿಯ ನಾಯಕವೃತ್ತಿಯ ಹನಸೆಯ ಶ್ರೀಪರಸು-
22 [ರಾ]ಮೇಶ್ವರದೇವರ ಅಂಗಭೋಗಸ್ನಾನನಿವೇದ್ಯಕ್ಕ . .
23 . . . ಳಕ್ಕಂ ಅತಿಥಿಯಭ್ಯಾಗತರ ತಪೋಧನರ ವಿದ್ಯಾರ್ತ್ಥಿ
24 . . ಹಾರದಾನಕ್ಕಂ ಖಣ್ಡಸ್ಫುಟಿತಜೀರ್ಣ್ನೋದ್ಧಾರಕ್ಕಂ ಮಾಟಕೂಟ
25 . . . . ಸ್ವಸ್ತಿ ಯಮನಿಯಮಸ್ವಾಧ್ಯಾಯಧ್ಯಾನಧಾ
26 . . . . . ಷ್ಠಾಣಜಪಸಮಾಧಿಶೀಳಗುಣಸಂಪನ್ನ-
27 ರಪ್ಪ ಶ್ರೀಮತು ಸೋಮಕತ್ರ್ತಾರಪಣ್ಡಿತದೇವರ ಕಾಲಂ ಕಚ್ಚಿ
28 [ಧಾರಾ]ಪೂರ್ವ್ವಕಂ ಮಾಡಿ ಬಿಟ್ಟ ದತ್ತಿ ಚಿಕ್ಕಲಬ್ಬೆಗೆಱೆಯ
29 [ಚತು]ಸ್ಸೀಮಾಸಂಬನ್ಧಮೆನ್ತೆಂದಡೆ ಪೂರ್ವ್ವಉತ್ತರದಕ್ಷಿಣದಿಶಾಭಾ
30 . . . ನೀರ್ವ್ವರಿಯೆ ಮೇರೆ ಪಶ್ಚಿಮದಿಶಾಭಾಗಕ್ಕೆ ಕೊಟ್ಟೂರ ಪೆರ್ವ್ವಟ್ಟೆ
31 . . . . . ಗದ್ದೆ ಅಲ್ಲಿಂ ತೆಂಕ ಬೆಟ್ಟಲು ೨೦೦ ಆ ಕೆಯಿ .
32 . . . . . . . ನಂದಾದೀವಿಗೆಗೆ ಗಾಣದೊಕ್ಕಲು ೧ ಇನ್ತೀ . .
33 ಸರ್ವ್ವಬಾಧಾಪರಿಹಾರವಾಗಿ ಬಿಟ್ಟನಿನ್ತೀ ಧರ್ಮ್ಮಮಂ ಪ್ರತಿಪಾಳಿಸಿ . .
34 . . . ವಾರಣಾಸಿ ಕುರುಕ್ಷೇತ್ರ ಪ್ರಯಾಗೆಯರ್ಘ್ಯತೀರ್ತ್ಥಂಗಳಲು ಸಾ
35 . . . . ವಿಲೆಯ ಕೋಡು ಕೊಳಗಮ ನವರತ್ನಂಗಳಂ ಕಟ್ಟಿಸಿ ಚತುರ್ವ್ವೇ-
36 [ದಪಾರಗರ]ಪ್ಪ ಸಾಸಿರ್ವ್ವರು ಬ್ರಾಹ್ಮಣರ್ಗ್ಗೆ ದಾನಂಗೆಯ್ದ ಫಲಮ . .
37 ಈ ಧರ್ಮ್ಮಮ[ನಾವ]ನೊರ್ವ್ವನಳಿದ(ಂ)ನಾ ತೀರ್ತ್ಥಂಗಳೊಳು ಕವಿಲೆಯನಾ ಬ್ರಾ-
38 . . . ಮ ಕೊನ್ದ ಪಞ್ಚಮಹಾಪಾತಕನಕ್ಕು ॥ ಸ್ವದತ್ತಂ ಪರದತ್ತಂ ವಾ
39 ಯೋ ಹರೇತಿ ವಸುಂಧರಾಂ । ಷಷ್ಟಿರ್ವ್ವರ್ಷಸಹಸ್ರಾಣಿ ವಿಷ್ಟಾಯಾಂ ಜಾಯ-
40 [ತೇ] ಕ್ರಿಮಿ[ಃ*] ॥ ಬಹುಭಿರ್ವಸುಧಾ ಭುಕ್ತಾ ರಾಜಭಿಸ್ಸಗರಾದಿಭಿರ್ಯಸ್ಯ ಯಸ್ಯ
41 ಯದಾ ಭೂಮಿ ತಸ್ಯ ತಸ್ಯ ತದಾ ಫಲಂ ◎ ಹನಸೆ ೧೨ ವೃ-
42 ತ್ತಿಯ ಸಮಸ್ತಪ್ರಜೆಯುಂ ಪರಿಗ್ರಹಮುಂ ಬೇವರ್ಗ್ಗೆ ದೇವ ಗೌಡ
43 ?ರ್ನ್ನ್ಮಕೊಳಗ ಮೇಂಟೆಯ ಸೊಡುಗುಯ್ಯಲ ಭತ್ತ ಒನ್ದು ಪೊ . . . .
44 . . . ರೆಯಿಂ ನಡಸುವರು ಗಾಣದೊಕ್ಕಲು ಗಾಣದಲು . . .
45 . . ರೆಣ್ಣೆಯಂ ನಡಸುವರು ಈ ಶಾಸನವಂ ಬರೆದಂ ಸೇನಬೋವ
46 ಸೋಮನಾಥಯ್ಯಂ ಖಂಡರಿಸಿದಂ ಕಂಚಗಾಱ . .
47 . ಜನ ಮಗ ದಾಸೋಜ ಮಂಗಳ ಮಹಾಶ್ರೀ ಶ್ರೀ [॥*]
48 . . . ಕಾಳಾಮುಖಸ್ಥಾನಕರ್ತಾರಮಠ
49 . . . ನಾನಾದೇಸಿಗಪ್ರಮುಖವಾಗಿ ಬಿಟ್ಟ ಧರ್ಮ್ಮ
50 . . ತಂದೆಡೆ ಅಡಕೆ ಎತ್ತಿನ ಹೇಱಿಂಗೆ ೨೦ ತ್ತು ಕತ್ತೆಗೆ . .
51 ಎಲೆ ಹೇಱಿಂಗೆ ೧೦೦ ಱು ತಲೆವೊರೆಗೆ ೫೦ತ್ತು ಮೆಳಸು
52 ಹೇಱಿಂಗೆ ಸೊಳಸ ೨ ಡು ಇ ಧರ್ಮ್ಮವಪ್ಪುದು ನಾಯಕ
53 ಸಲುದು ಮತ್ತಂ ಹೆಜ್ಜುಂಕದವರು ನಂದಾದೀ
54 . . . . ಪಣ ೧ . . ಕೊಡುವರು ॥

## No. 185.

(*A.R. No.* 550 *of* 1915.)

ON TWO SLABS SET UP IN THE COURT-YARD OF RAMALINGASVAMI TEMPLE IN GURUZALA, ADONI TALUK, SAME DISTRICT.

This is a little damaged and dated **Chālukya-Vikrama year 36, Khara, Uttarāyaṇa-saṅkrānti** corresponding, probably, to **A.D. 1111 December 25 Monday** (not verifiable). It refers itself to the reign of the Chāḷukya king **Tribhuvanamalladēva** and mentions the *rājaguru* **Anantaśiva** as ruling over **Uṇukalu** and **Gurindālu.** The *Pergaḍe* **Nimbaṇayya** is stated to have made a gift of 14 *mattars* of land, in addition to 16 *mattars* already granted, for the service of the god Rāmēśvara.

1 @ನಮಸ್ತುಂಗಶಿರಶ್ಚುಂಬಿ-
2 ಚಂದ್ರಚಾಮರಚಾರವೇ । ತ್ರೈಲೋ-
3 ಕ್ಯನಗರಾರಂಭಮೂಲಸ್ತಂ-
4 ಭಾಯ ಸಂಭವೇ ॥ ಸ್ವಸ್ತಿ ಸಮಸ್ತಭು-
ವ-
5 ನಾಶ್ರಯ ಶ್ರೀಪ್ರಿಥ್ವೀವಲ್ಲಭ ಮಹಾ-
6 ರಾಜಾಧಿರಾಜ ಪರಮೇಸ್ವರ ಪರಮಭಟ್ಟಾ-
ರಕ
7 ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭ-
ರಣ ಶ್ರೀ-
8 ಮತ್ರಿಭುವನಮಲ್ಲದೇವರ ವಿಜಯ-
9 ರಾಜ್ಯಮುತ್ತರೋತ್ತರಾಭಿವ್ರಿದ್ಧಿ(ರ್)ಪ್ರವ-
ರ್ದ್ಧಮಾ-
10 ನಮಾಚಂದ್ರಾರ್ಕ್ಕತಾರಂ ಸಲುತ್ತಮಿ-
11 ರೆ ಶ್ರೀಮದನಂತಶಿವ ರಾಜಗುರು-
12 ದೇವರು ಉಣುಕಲುಂ ಗುರಿಂದಾಲುಮಂ
13 ದುಷ್ಟನಿಗ್ರಹಸಿಷ್ಟಪ್ರತಿಪಾಳನದಿ-
14 ನಾಳುತ್ತಮಿರೆ. ತತ್ಪಾದಪದ್ಮೋಪ-
15 ಜೀವಿ ಪೆರ್ಗ್ಗಡೆ ನಿಂಬಣಯ್ಯಂಗಳ್
16 ಚಾಳು[ಕ್ಯ*]ವಿಕ್ರಮಗಾಲ ೩೬ ನೆಯ
17 ಕರಸಂವತ್ಸರದುತ್ತರಾಯಣ-
18 ಸಂಕ್ರಾ(ಂ)ನ್ತಿಪರ್ವ್ವನಿಮಿತ್ತದಿ ಶ್ರೀರಾ

*Second Slab.*

19 . . . ದೇವರ್ಗ್ಗೆ ಮುನ್ನ ನಡೆವ ೧೬
ಮ
20 . . ಲು ಮತ್ತಂ ದೇವರ ಗಂಧ ಧೂಪ
21 . . . ಕ್ಕಂ ಬಿಟ್ಟ ಮತ್ತರು ೧೪ ಈ
ಧರ್ಮ್ಮ
22 . ನಾವನೊರ್ವ್ವ ಪ್ರತಿಪಾಳಿಸಿದನಾ-
23 ತಂ ನಾರಣಾಸಿಕುರುಕ್ಷೇತ್ರದಲು
24 ಚತುರ್ವ್ವೇದಪಾರಗರಪ್ಪ ಮಹಾ-
25 ಬ್ರಾಹ್ಮಣರ್ಗ್ಗೆ ಸಾಸಿರ ಕವಿಲೆಯ ದಾ-
26 ನಂಗೆಯ್ದ ಮಹಾಫಲಮಕ್ಕು
27 ಈ ಧರ್ಮ್ಮವನಾವನೊರ್ವ್ವನಳಿ-
28 ದಾತನಾ ತೀರ್ತ್ಥದಲನಿತು ಕವಿ-
29 ಲೆಯ್ಮನನಿತು ಬ್ರಾಹ್ಮಣರ ಕೊಂ-
30 ದ ಮಹಾಪಾತಕನಕ್ಕು @ ॥ ಸ್ವದತ್ತಂ
31 ಪರದತ್ತಂ ವಾ ಯೋ ಹರೇತಿ ವಸುಂಧ-
32 ರಾ[ಂ*] ಷಷ್ಟಿರ್ವ್ವರ್ಷಸಹಶ್ರಾನಿ ವಿಷ್ಟಾ-
33 ಯ ಜಾಯತೇ ಕ್ರಿಮಿ [॥*]

## No. 186.

(*A.R. No.* 277 *of* 1918.)

ON A SLAB SET UP IN THE COURT-YARD OF THE ISVARA TEMPLE AT GUDIHALLI, HARAPANAHALLI TALUK, SAME DISTRICT.

This is damaged and dated **Chālukya-Vikrama year 36, Pushya, śu. 11, Ādivāra, Uttarāyaṇa-saṅkrānti** probably corresponding to **A.D. 1111 December 12 Tuesday** (not Sunday, as stated), Uttarāyaṇa-sankrānti occured on December 25 Monday. It refers itself to the reign of the Chāḷukya king **Tribhuvanamalladēva** whose feudatory **Tribhuvanamalla-Pāṇḍyadēva** was ruling over **Noḷambavāḍi thirtytwo-thousand.** The *Mahāsāmanta* **Siṅgarasa** of the **Vināyaka family,** son of **Kāmarasa** and **Chaṭṭabbe,** is stated to have made a gift of land for the service of the god Noḷambēśvara, for feeding ascetics and for education. The gift was made after washing the feet of **Varēśvara-Paṇḍita,** disciple of **Vāmaśakti-Paṇḍita** who was the disciple of **Divyaśakti-Paṇḍita.**

1 ನಮಸ್ತುಂಗಸಿರ(ಃ)ಶ್ಚುಂಬಿಚಂದ್ರಚಾಮರಚಾರವೇ । ತ್ರೈಳೋಕ್ಯನಗರಾರಂಭಮೂಲಸ್ತಂಭಾ-
2 ಯ ಸಂಭವೇ ॥ ಶ್ರೀಪರಮನ ಪದಕಮಳಮನಂ ಪೊತ್ತು ಸ್ಮರಣೆಮಾರ್ಪ ಪೂಜಿಪ ಬಗೆಯಿಂ
3 ಬ್ಯಾಪಕನೊಡಗೂಡುವ ನಿಷ್ಠಾಪರತೆಯ ದಿವ್ಯಶಕ್ತಿಪಂಡಿತದೇವರು । ಗಣಪತ್ಯಾಯ ನಮಃ।
4 ಇವರ ಹ್ರಿತ್ಪದ್ಮದೊಳುದೆಯದೆ ಪರಮನನತ್ಯಂತಸೂಕ್ಷ್ಮನಂ ವ್ಯಾಪಕನಂ ಸ್ಥಿರ . .
5 ನೆಯಿ ಯೋಗದೊಳಿರದೆಯ್ದಿದ ವಾಮಸಕ್ತಿಪಣ್ಡಿತದೇವರು ॥ ದುರಿತೇಭೇಂದ್ರಕಠೋರ-
6 ಕುಂಭದಳನಂ ಶ್ರೀಘನವಕ್ತ್ರೋಗ್ರಸತ್ಕರಸಾಖಾಂಕುರಧರ್ಮ್ಮನಿರ್ಮ್ಮಳಗುಣಂ ಪಂಚೇಂದ್ರಿ-
7 ಯಪ್ರೌಢತಸ್ಕರಸಾಮೂಹಭಯಂಕರಂ ಪ್ರಬಳಶೌಚಾಚಾರಸೀಳಂ ವರೇಸ್ವರದೇವ-
8 ಪ್ರಭುನಾಮಧೇಯನೆಸೆದಂ ವಿಶ್ವಂಭರಾಚಕ್ರದೊಳ್॥ ಸ್ವಸ್ತಿ ಸಮಸ್ತಭುವನಾಶ್ರಯಂ ಶ್ರೀಪ್ರಿಥ್ವೀವ-
ಲ್ಲಭಂ
9 ಮಹಾರಾಜಾಧಿರಾಜ ಪರಮೇಸ್ವರ ಪರಮಭಟ್ಟಾರಕಂ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭ-
10 ರಣಂ ಶ್ರೀಮತ್ತ್ರಿಭುವನಮಲ್ಲದೇವರ ವಿಜಯರಾಜ್ಯಮುತ್ತರೋತ್ತರಾಭಿವ್ರಿದ್ಧಿಪ್ರವರ್ದ್ಧಮಾನಮಾಚಂ-
11 ದ್ರಾರ್ಕ್ಕತಾರಂಬರಂ ಸಲುತ್ತಮಿರೆ ◎ ತತ್ಪಾದಪದ್ಮೋಪಜೀವಿ ಸ್ವಸ್ತಿ ಸಮಸ್ತ ಪ್ರಸಸ್ತಿಸಹಿತಂ
12 ಶ್ರೀಮನ್ಮಹಾಮಣ್ಡಳೇಸ್ವರಂ ತ್ರಿಭುವನಮಲ್ಲಚಾಣ್ಕ್ಯದೇವರು ನೊಳಂಬವಾಡಿ ಮೂವತ್ತಿರ್ಚ್ಛಾ-
13 ಸಿರಮುಮಂ ದುಷ್ಟನಿಗ್ರಹವಿಸಿಷ್ಟಪ್ರತಿಪಾಲನದಿಂದಾಳುತ್ತಮಿರೆ ತತ್ಪಾ-
14 ದಪದ್ಮಾರಾಧಕರಪ್ಪ ಬಾಯರ ವಂಸಾನ್ವಯ ॥ ಬೆನೆಗಂಗವಾತ್ಮಸಜ್ಜನವೆನಿಸು-
15 ವ ಸೋವಬ್ಬೆಗಂ ಧರಿತ್ರೀತಳದೊಳು ಜಲನಿಧಿಯ ಸಿಪ್ಪಿನೊಳಗಣಿನನುಪಮಮೌಕ್ತಿಕ-
16 ಮೆ ಪುಟ್ಟುವಂದದಿನೊಗೆದಂ ॥ ಕೂರೊಳು ಸುಭಗಂ ಕುಳವಧು ವಾರಿಜಮುಖಿ ಮಾದಿಯ-
17 ಬ್ಬೆಗಂ ಪುಟ್ಟಿದನೀ ಧಾರಿಣಿಗೆ ಕಲ್ಪವ್ರಿಕ್ಷಮುದಾರಗುಣಂ ಮಾರಸಿಂಗನಾಹವಧೀರ ॥ ಧೀರಂ
18 ನೊಳಂಬಗವುಂಡನುದಾರಂ ಸಲೆ ಚಿಮ್ಮಿಕಬ್ಬೆಗಂ ಸಕಳಗುಣಾಧಾರನೆನೆ ಭೂಪನುದಯಿ-
19 ಸಿ ಧಾರಿಣಿಯಲು ನೆಗಳ್ದನಲ್ತೆ ಕಾಯ್ವರ ಗಣ್ಡ॥ ಬೂಪಂಗಂ ಕುಲವಧುವೀ ಸೋವಬ್ಬೆಗ-
20 ಮುದಿತಕೀರ್ತ್ತಿ ಪುಟ್ಟುವ ತೆಱದಿಂದೀ ವಸುಧೆಯಲವತರಿಸಿದ ಕಾ-
21 ಮನ್ರಿಪಂ ಪ್ರಣಿಸೆಗಾಂಕನೆನೆ ಪೊಗೞದೆರಾರು ॥ ಕಟ್ಟಾಳು ಪ್ರಣಿಸೆಗಂ ಕುಲವಧು ಚ-
22 ಟ್ಟಬ್ಬೆಗಮೆಂಟುನೂಱಕ್ಕಧಿಪತಿಯಾಗಲು ಪುಟ್ಟಿದ ಕುಣಂಗಿಲುನಾಳ್ಕಂ ನೆಟ್ಟನೆ
23 ಸಾಮನ್ತಸಿಂಗನುರ್ವ್ವೀತಳದೊಳು ॥ ಸ್ವಸ್ತಿ ಸಮಧಿಗತಪಂಚಮಹಾಸಬ್ದ ಮ-
24 ಹಾಸಾಮನ್ತಂ ವಿಜೆಯಲಕ್ಷ್ಮೀಕಾನ್ತಂ ನಿಜವಿಜೆಯಭುಜಾದಣ್ಡಂ ಪ್ರಜೆಮೆಚ್ಚೆಗಣ್ಡಂ
25 ವಿನಾಯಕನಾಮಾನ್ವಯಕುಳಪ್ರದೀಪಂ ಸೌರ್ಯ್ಯಪ್ರತಾಪನೀಸ್ವರವರ-
26 ಪ್ರಸಾದಂ ದಾನವಿನೋದಂ ದಾಯಿಗಕುಧರಕುಳಿಸದಣ್ಡಂ ಪೆಱಗೆಪಳಿವ-
27 ರಗಣ್ಡಂ ನೀತಿಚಾಣಾಕ್ಯನೇಕವಾಕ್ಯಂ ವೈರಿಮನೋಭಂಗನಯ್ಯನಸಿಂಘಂ ಮಾರ್ಕ್ಕೋಲಬ-
28 ಱಸಿಡಿಲು ನಾಮಾದಿಸಮಸ್ತಪ್ರಸಸ್ತಿಸಹಿತಂ ಶ್ರೀಮನ್ಮಹಾಸಾಮನ್ತಂ
29 ಸಿಂಗರಸಂ ಸ್ವಸ್ತಿ ಶ್ರೀಮಚ್ಚಾಳುಕ್ಯವಿಕ್ರಮವಷದ ೩೬ ನೆಯ ಖರಸಂ-
30 ವತ್ಸರದ ಪುಷ್ಯ ಸುದ್ಧ ೧೧ ಯಾದಿವಾರಮುಮುತ್ತರಾಯಣಸಂಕ್ರಾನ್ತಿ-
31 ಯುಂ ವ್ಯತೀಪಾತಮುಂ ಕೂಡಿದಂದು ಶ್ರೀಮನ್ನೊಳಂಬೇಸ್ವರದೇವರಂಗಭೋ-
32 ಗಕ್ಕಂ ಸ್ನಾನನಿವೇದ್ಯಕ್ಕಂ ತಪೋಧನರ್ಗ್ಗಂ ವಿದ್ಯಾದಾನಕ್ಕಂ ತ್ರಿಭೋಗಮಾಗಿ ಸ್ವ-
33 ಸ್ತಿ ಯಮನಿಯಮಸ್ವಾಧ್ಯಾಯಧ್ಯಾನಧಾರಣಮೌನಾನುಷ್ಠಾಣಪರಾ-
34 ಯಣಜಪಸಮಾಧಿಸೀಲಗುಣಸಂಪನ್ನರಪ್ಪ ಶ್ರೀಮದು ವರೇಸ್ವ-
35 ರಪಣ್ಡಿತದೇವರ ಕಾಲಂ ಕಚ್ಚಿ ಧಾರಾಪೂರ್ವ್ವಕಂ ಮಾಡಿ . . . . ಪಿರಿಯಕೆ-
36 ಱೆಯ ಕೆಳಗೆ ಬಿಟ್ಟ ತೋಂಟ . . . . . . . . . . ಕೆಱೆಯ ಕೆಳಗೆ ಗರ್ದ್ದೆ
37 ಮತ್ತಮ್ಮಾಲಾಕಾರಂ ಮಾದ . . . . . . . . . . ಅನ್ತು ಗರ್ದ್ದೆ
38 ಮತ್ತರು . . ಹಗರೆಯಿಂದ . . . ಪೊನ್ನಬ್ಬೆಯ
39 ಹ . . . ಕೆಯ ಮೊ . . . . . . . . . . ಬೆದ್ದಲೆ
40 ಮತ್ತ ೨ . . . . . . . . . . . . . ಕ್ಷೇತ್ರ
41 . . . . . . . . . . . . . ಪೊನ್ನೆ-
42 ಲು ಕಟ್ಟಿಸಿ ಚತುರ್ವ್ವೇದ . . . . . . . . . . . . . ರಪ್ಪ
43 ಬ್ರಾಹ್ಮಣರುಮಂ ಕವಿಲೆಯ್ಮನಳಿದ ಮಹಾ[ಪಾತ]ಕಮಕ್ಕು ॥ ಸಾಮಾ[ನ್ಯೋಯಂ]ಧರ್ಮ್ಮ-

44 ಸೇತುರ್ನ್ನೃಪಾಣಾಂ ಕಾ[ಲೇ ಕಾ]ಲೇ ಪಾಲನೀಯೋ ಭವದ್ಭಿಃ ಏತಾನಿ ಷಡ್ಭಾಗಿನಃ ಪಾ-
45 [ರ್ತ್ಥಿವೇಂದ್ರಾನ್] ಭೂಯೋ ಭೂಯೋ ಯಾಚತೇ ರಾಮಭದ್ರ[ಃ*] ॥ ಸ್ವದ . . . .
46 ವಾ ಯೋ ಹರೇತ ವಸುಂಧರ । ಷಷ್ಟಿರ್ವ್ವರ್ಷಸಹಸ್ರಾಣಿ ವಿಷ್ಠಾಯಾಂ ಜಾಯ-
47 ತೇ ಕ್ರಿಮಿ[ಃ*] ॥ ಆರಾನುಂ ಬಿಟ್ಟುರಿದಂ ಬಿಡಿತೇರದೆನಲು ವೇದ . . . . ತನೆ ಬಿಟ್ಟಂ
48 ಸಾರಧರ್ಮ್ಮಮಿದ ಕೈವಾರದಿ ಕೈಕೊಣ್ಡು ರಕ್ಷಿಸುತ್ತಿರ್ಕ್ಕೆ . . .

## No. 187.

(*A.R. No.* 319 *of* 1925.)

ON A STONE PLANTED BEFORE THE RUINED KALLESVARA TEMPLE AT KOTTUR, KUDLIGI TALUK, SAME DISTRICT.

This is dated **Chālukya-Vikrama year 36, Nandana, Vaiśākha, śu. 3, Bṛihaspativāra, Uttarāyaṇa** (time ?) corresponding probably to **A.D. 1112 April 1 Monday,** not Thursday, as stated. It refers itself to the reign of the Chāḷukya king **Tribhuvanamalladēva** and mentions the *Mahāmaṇḍalēśvara* **Tribhuvanamalla-Pāṇḍyadēva** as ruling over **Noṇambavāḍi thirtytwo-thousand** and **Ghaṭṭiyarasa** of the **Kadamba** dynasty, as ruling over **Kōgaḷi five-hundred.** The ḷatter is said to have made a gift of land, after washing the feet of **Amṛitarāśi-Paṇḍitadēva,** for the service of the god Rāmēśvara of **Koṭṭūru** and for feeding ascetics.

1 ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ ತ್ರೈಳೋಕ್ಯನಗರಾರಂಭಮೂಳಸ್ತಂಭಾಯ ಶಂಭ-
ವೇ ॥
2 ವಿಶುದ್ಧಜ್ಞಾನದೇಹಾಯ ತ್ರಿವೇದೀದಿಬ್ಯಚಕ್ಷುಷೇ । ಶ್ರೇಯಃಪ್ರಾಪ್ತಿನಿಮಿತ್ತಾಯ ನಮಃ ಸೋಮಾರ್ದ್ಧ-
ಧಾರಿಣೇ ॥
3 ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀಪ್ರಿಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ
ಸತ್ಯಾಶ್ರಯ-
4 ಕುಳತಿಳಕಂ ಚಾಳುಕ್ಯಾಭರಣಂ ಶ್ರೀಮತ್ತ್ರಿಭುವನಮಲ್ಲದೇವರ ವಿಜಯರಾಜ್ಯಮುತ್ತರೋತ್ತರಾಭಿವೃ-
ದ್ಧಿಪ್ರವರ್ದ್ಧಮಾನಮಾ-
5 ಚಂದ್ರಾರ್ಕ್ಕತಾರಂ ಸಲುತ್ತಮಿರೆ ತತ್ಪಾದಪದ್ಮೋಪಜೀವಿ ಸಮಧಿಗತಪಂಚಮಹಾಶಬ್ದ ಮಹಾಮಂಡ-
ಳೇಶ್ವರ ಕಾಂಚೀಪುರವ-
6 ರಾಧೀಶ್ವರಂ ಯದುವಂಶಾಂಬರದ್ಯುಮಣಿ ಸುಭಟಚೂಡಾಮಣಿ ನಿಜಕುಳಕಮಳಮಾರ್ತ್ತಣ್ಡ ಪಟ್ಟಿಭೇ-
ದಿಗಂಡಂ ರಾಜಿಗ-
7 ಚೋಳಮನೋಭಂಗಂ ಶ್ರೀಮತ್ತ್ರಿಭುವನಮಲ್ಲದೇವಪಾದಾಬ್ಜಭ್ರಿಂಗಂ ಶ್ರೀಮನ್ಮಹಾಮಣ್ಡಳೇಶ್ವರ
ತ್ರಿಭುವನಮಲ್ಲಪಾ-
8 ಣ್ಡ್ಯದೇವರು ನೊಣಂಬವಾಡಿ ಮೂವತ್ತೆರ್ಚ್ಛಾಸಿರಮುಮಂ ಸುಖಸಂಕಥಾವಿನೋದದಿಂದಾಳ್ದು ರಾ-
ಜ್ಯಂಗೆಯ್ಯು-
9 ತ್ತಮಿರೆ ಸಮಧಿಗತಪಂಚಮಹಾಶಬ್ದ ಮಹಾಮಂಡಳೇಶ್ವರ ಬನವಾಸಿಪುರವರಾಧೀಶ್ವರಂ ಭೂಮ್ಯೋಂ-
10 ದುಶೇಖರಪ್ರಸಾದೋತ್ಪತ್ತಿತ್ರಿಳೋಚನಮಯೂರವರ್ಮ್ಮಕಂದಬಾನ್ವಯವಿಭೂಷಣ ಪರ್ಮ್ಮಟ್ಟ-
ತೂರ್ಯ್ಯನಿರ್ಘೋಷ-
11 ಷಣಂ ಹಿಮವದ್ಗಿರೀಂದ್ರರುಂದ್ರಶಿಖರೀಶಿಖರಸ್ಫಟಿಕಶಿಳಾಸ್ತಂಭ ಬದ್ಧಮದಗಜಮಹಾಮಹಿಮಾಭಿರಾಮಂ
12 ಸಂಗ್ರಾಮಭೀಮಂ ಅಷ್ಟಾದಶಾಶ್ವಮೇಧಾದೀಕ್ಷಿತಂ ಚತುರಾಶೀತಿನಗರಾಧಿಷ್ಟಿತಂ ಉಚ್ಚಂಗೀದೇವೀ-
ಲಬ್ಧವರಪ್ರಸಾದಂ
13 ಮ್ರಿಗಮದಾಮೋದಂ ದಾಯಿಗಮನ್ನೆಯಮ್ರಿಗಬೇಂಟೆಕಾಱಂ ಅಲ್ಲಹುಲಿದೇವನಂಕಕಾಱಂ ಶ್ರೀ-
ಚಂದ್ರೇ-
14 ಶ್ವರದೇವರ ಪಾದಾಬ್ಜಭ್ರಿಂಗಂ ಸಾಹಸೋತ್ತುಂಗಂ ಶ್ರೀಮನ್ಮಹಾಮಣ್ಡಳೇಶ್ವರಂ ಘಟ್ಟಿಯರಸಂ ದು-
ಷ್ಟನಿಗ್ರಹ-

15 ವಿಸಿಷ್ಟಪ್ರತಿಪಾಳನದಿಂ ಕೋಗಳಿಯೈಯ್ನೂಱುಮನಾಳ್ದು ಸುಖದಿಂ ರಾಜ್ಯಂಗೆಯ್ಯುತ್ತಮಿರೆ ಸ್ವಸ್ತಿ ಶ್ರೀ
ಚಾಳುಕ್ಯವಿಕ್ರ-

16 ಮವರ್ಷದ ೩೭ ನೆಯ ನಂದನಸಂವತ್ಸರದ ವೈಶಾಖ ಶುದ್ಧ ೭ ಬ್ರಿಹಸ್ಪತಿವಾರಮುಮುತ್ತರಾಯಣ-
ಸಂ-

17 ಕ್ರಾ(ಂ)ನ್ತಿಯ ಪರ್ವ್ವನಿಮಿತ್ತಮುಮಾಗಿ ಸ್ವಸ್ತಿ ಯಮನಿಯಮಸ್ವಾಧ್ಯಾಯಧ್ಯಾನಧಾರಣಮೌನಾನು-
ಷ್ಠಾ-

18 ನಜಪತಪಸಮಾಧಿಶೀಲಸಮ್ಪನ್ನರುಂ ವ್ಯಾಕರಣಾದ್ಯಾಗಮಸಿದ್ಧಾಂತತರ್ಕ್ಕಕರ್ಕ್ಕಶರುಂ ದೀನಾನಾ-
ಥಾಶ್ರಿ-

19 ತಜನಕಲ್ಪವ್ರಿಕ್ಷರುಂ ಗುರುಕುಳಸಮುದ್ಧರಣರುಮಪ್ಪ ಶ್ರೀಕೊಟ್ಟೂರ ಮೂಲಸ್ಥಾನಂ ಶ್ರೀ-

20 ರಾಮೇಶ್ವರದೇವರಸ್ಥಾನದಾಚಾರ್ಯ್ಯರಪ್ಪ ಶ್ರೀಮದಮೃತರಾಶಿಪಂಡಿತ ದೇವರ ಕಾಲಂ ಕರ್ಚ್ಚಿ ಧಾ-

21 ರಾಪೂರ್ವ್ವಕಂ ಮಾಡಿ ದೇವರಂಗಭೋಗಕ್ಕಂ ನಿವೇದ್ಯಕ್ಕಂ ಖಂಡಸ್ಫುಟಿತಜೀರ್ಣ್ಣೋದ್ಧಾರಕ್ಕಂ ತಪೋ-
ಧನರಾಹಾ-

22 ರದಾನಕ್ಕಂ ಪಾವುಳವರ್ಗ್ಗಕ್ಕಂ ಕೊಟ್ಟೂರ ತೆಂಕಣ ಪೊಲದ ನೇಱಿಲಿಕೆಱೆಯುಮನಾ ಕೆಱೆಯ ಕೆಳಗಣ

23 ಗದ್ದೆಯುಮಂ ಮಱಿಯೂರ ಸೀಮೆಯಿಂ ಬಡಗಲು ನಾಗನೂರ ಸೀಮೆಯಿಂ ಮೂಡಲು ಬನ್ನಿಯಬಾಗಿಂ
ತೆಂ-

24 ಕಲು ಕಾಱುಕುಂಚನ ಕೊಱನ ದಾರಿಯಿಂ ಪಡುವಲಂತು ನಾಲ್ಕುಂ ಸೀಮೆಯಿಂ ನಡುವೆ ಕೊಟ್ಟ ಎರೆಯಕೆ-
ಯಿ ಮತ್ತರು

25 ಮೂವತ್ತು ಕಿಸುಕಾಡು ಮತ್ತರಿಪ್ಪತ್ತು ಅನ್ತುಮತ್ತರೈವತ್ತುಂ ಪಿರಿಯಕೆಱೆಯ ಬಯಲುಗದ್ದೆ ಕಮ್ಮ

26 ನಾಲ್ನೂಱಯ್ವತ್ತು ಸಾಯಿರ ಬಳ್ಳಿಯ ತೋಂಟಮುಮೊನ್ದು ಗಾಣಮು ಕೋಟೆಯೊಳಗೆ ನಾಲ್ಕು ಮನೆ-
ಯ

27 ನೆಲಸಣಮುಮಂ ಕೊಟ್ಟರಿನ್ತೀ ಧರ್ಮ್ಮಮಂ ಸಧರ್ಮ್ಮದಿಂ ರಕ್ಷಿಸಿದವರು ಶ್ರೀಗಂಗೆವಾರಣಾಸಿಕುರುಕ್ಷೇ-

28 ತ್ರದಲ್ಲಿ ಸಾಯಿರ ಕಪಿಲೆಯಂ ಕೋಡುಂ ಕೊಳಗುಮಂ ಪೊನ್ನಲು ಕಟ್ಟಿ ವೇದಪಾರಗರಪ್ಪ ಬ್ರಾಹ್ಮಣ-
ರ್ಗ್ಗೆ ಕೊ-

29 ಟ್ಟ ಫಲಮಂ ಪಡೆವರೀ ಧರ್ಮ್ಮಮನಳಿದವರು ಸಾಯಿರ ಕವಿಲೆಗಳುಮಂ ಬ್ರಾಹ್ಮಣರುಮಂ ಕೊನ್ದ ಪಾಪಂ

30 ಪಡೆವರು ಸ್ವದತ್ತಂ ಪರದತ್ತಂ ವಾ ಯೋ ಹರೇತ ವಸುಂಧರಾ[ಂ*] ಷಷ್ಠಿರ್ವ್ವರ್ಷಸಹಸ್ರಾಣಿವಿಷ್ಟಾ-
ಯಾಂ ಜಾಯ-

31 ತೇ ಕ್ರಿಮಿ[ಃ*] ॥ ಅಕರಸ್ಯ ಕರೋತ್ಪತ್ತಿರ್ಗ್ಗೋಸಹಸ್ರವಧಸ್ಮ್ರಿತಃ ಕರಪ್ರವ್ರಿತ್ತಿವಿಚ್ಛೇದೋ ಗೋ-
ಕೋಟಿಫಲಮಶ್ನುತೇ ॥

32 ಶ್ರೀಘಟ್ಟದೇವನ ಸನ್ಧಿವಿಗ್ರಹಿ ಮಲ್ಲಪರಾಜಂ ಬರೆದಂ ಕಂಡರಿಸಿದಂ ಮಾದಿಮೋಜಂ ಶ್ರೀ ಶ್ರೀ ಶ್ರೀ ॥

## No. 188.

(*A.R. No.* 279 *of* 1918.)

ON A SLAB SET UP IN THE COURT-YARD OF THE ISVARA TEMPLE AT GUDIHALLI, HARAPANAHALLI TALUK, SAME DISTRICT.

This is dated **Chālukya-Vikrama year 37, Nandana, Pushya, śu. 11, Sōmavāra, Uttarāyaṇa-saṅkrānti, Vyatīpāta** corresponding to **A.D. 1112 December 30 Monday.** It refers itself to the reign of the Chāḷukya king **Tribhuvanamalladēva** and states that, when the *Mahāsāmantādhipati* **Anantapāḷayya** was in charge of the *vaḍḍa-rāvuḷa* of the **seven-and-a half lakh** country, **Aḷiya Mādirājarasa** of that of **Banavāsi twelve-thousand Halasige twelve-thousand** and **Noḷambavādi thirtytwo-thousand** and **Pālimarasa** was in charge of the *vaḍḍa-rāvuḷa* of **Noḷambavāḍi thirytwo-thousand,** a grant of the toll-revenue was made under the orders of Anantapāḷayya, for the service of the god Noḷambēśvaradēva in **Arasiyakeṟe** in **Muttage thirty** by Chāvuṇḍamayya-Nāyaka. The gift was made after washing the feet of **Varēśvara-Paṇḍita.**

1 ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ ತ್ರೈಳೋಕ್ಯ[ನಗರಾರಂಭ]-

2 ಮೂಲಸ್ತಂಭಾಯ ಶಂಭವೇ ॥ ದುರಿತೇಭೇಂದ್ರಕಠೋರಕುಂಭದಳ-

3 ನಂ ಶ್ರೀಘನಪಕ್ಷೋ[ಗ್ರಸ]ತ್ಕರಸಾಖಾಂಕುರಧರ್ಮ್ಮನಿರ್ಮ್ಮಳಗುಣಂ ಪಂಚೇಂದ್ರಿಯ . . .

ಪ್ರೌಢತಸ್ಕರಸಾಮೂಹಭಯಂಕರಂ ಪ್ರಬಳಸೌಚಾಚಾರ-
ಬಳಂ ಪರ್ವ್ವೇಸ್ವರದೇವಂ ಪ್ರಭುನಾಮಧೇಯನೆಸೆದಂ ವಿಶ್ವಂಭರಾಚಕ್ರದೊ-
ಳ್ ॥ ಸ್ವಸ್ತಿ ಸಮಸ್ತಭುವನಾಶ್ರಯಂ ಶ್ರೀಪ್ರಿಥ್ವೀವಲ್ಲಭಂ ಮಹಾರಾ-
ಜಾಧಿರಾಜ ಪರಮೇಶ್ವರ ಪರಮಭಟ್ಟಾರಕಂ ಸತ್ಯಾಶ್ರಯಕುಳತಿಳಕಂ
ಚಾಳುಕ್ಯಾಭರಣಂ ಶ್ರೀಮತ್ರಿಭುವನಮಲ್ಲದೇವರ ವಿಜಯರಾಜ್ಯ-
ಮುತ್ತರೋತ್ತರಾಭಿವ್ರಿದ್ಧಿಪ್ರವರ್ದ್ಧಮಾನಮಾಚಂದ್ರಾರ್ಕ್ಕತಾರಂಬರಂ ಸ-
ಲುತ್ತಮಿರೆ ॥ ತತ್ಪಾದಪದ್ಮೋಪಜೀವಿ ॥ ಸ್ವಸ್ತಿ ಸಮಧಿಗತಪಂಚಮಹಾಸ-
ಬ್ದ ಮಹಾಸಾಮನ್ತಾಧಿಪತಿ ಮಹಾಪ್ರಚ(ಂ)ಣ್ಡದಣ್ಡನಾಯಕಂ ಅನನ್ತಪಾಳಯ್ಯಂಗ-
ಳ್ ಸಪ್ತಾರ್ದ್ಧಲಕ್ಷೆಯ ವಡ್ಡರಾವುಳದ ಸುಂಕಮಂ ಸುಖಸಂಕಥಾವಿನೋದದಿಂದಾ-
ಳುತ್ತಮಿರೆ ತತ್ಪಾದಪದ್ಮೋಪಜೀವಿ ಸ್ವಸ್ತಿ ಸಮಸ್ತಪ್ರಸಸ್ತಿಸಹಿತಂ ಶ್ರೀಮನು-
ಮಹಾಪ್ರಧಾನಂ ದಣ್ಡನಾಯಕ ಅಳಿಯ ಮಾದಿರಾಜರಸರು ಬನವಾಸೆ
ಪನ್ನಿಚ್ಚಾಸಿರದ ಹಲಸಿಗೆ ಪನ್ನಿಚ್ಚಾಸಿ[ರ]ದ ನೊಳಂಬವಾಡಿ ಮೂವತ್ತಿಚ್ಚಾಸಿರದ ವ-
ಡ್ಡರಾವುಳದ ಸುಂಕಮಂ ದುಷ್ಟನಿಗ್ರಹವಿಶಿಷ್ಟಪ್ರತಿಪಾಳನದಿಂದಾಳುತ್ತಮಿರೆ ತತ್ಪಾ-
ದಪದ್ಮೋಪಜೀವಿ ಶ್ರೀಮದ್ದಂಡನಾಯಕ ಪಾಲಿಮರಸರು ನೊಳಂಬವಾಡಿ ಮೂ[ವ]ತ್ತಿಚ್ಚಾ-
ಸಿರದ ವಡ್ಡರಾವುಳದ ಸುಂಕಮಂ ಸುಖದಿಂದಾಳುತ್ತಮಿರಲು ಆಯಯ್ಯನ ಬೆಸದಿಂ ಶ್ರೀ-
ಮತ್ ಚಾವುಣ್ಡಮಯ್ಯನಾಯಕರು ಕದಂಬಳಿಕೆ ಸಾಯಿರ ಕೋಗಳಿ ಐನೂಱ ವ-
ಡ್ಡರಾವುಳದ ಸುಂಕಮನಾಳುತ್ತಮಿರಲು ಶ್ರೀಮಚ್ಚಾಳುಕ್ಯವಿಕ್ರ[ಮ*]ಕಾಲದ ೩೭ ನೆಯ
ನನ್ದನಸಂವತ್ಸರದ ಪೌಷ್ಯ ಸುದ್ಧ ೧೧ ಸೋಮವಾರದಂದು ಉತ್ತರಾಯಣಸಂಕ್ರಾನ್ತಿ ವ್ಯ-
ತೀಪಾತಮುಂ ಕೂಡಿದನ್ದು ಕೋಗಳಿ ಐನೂಱ ಕಂಪಣ ಮುತ್ತಗೆ ಮೂವತ್ತಱ ಬಳಿ-
ಯ ಬಾಡಂ ಶ್ರೀಮದರಸಿಯಕೆಱೆಯ ನೊಳಂಬೇಸ್ವರದೇವರಂಗಭೋಗಕ್ಕಂ ಸ್ನಾನನಿ-
ವೇದ್ಯಕ್ಕಂ ನೊಳಂಬೇಸ್ವರದೇವರ ಎರಡುಂ ಕೌವುಂಗಿನ ತೋಟದ ಅಡಕೆಯಂ ವಡ್ಡರಾವುಳದ
ಸುಂಕಮಂ ಶ್ರೀಮತುಪರ್ವ್ವೇಸ್ವರಪಂಡಿತದೇವರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಮಾಡಿ ಬಿಟ್ಟ-
ರೀ ಧರ್ಮ್ಮಮನಾವನೋರ್ವ್ವಂ ಪ್ರತಿಪಾಳ್ಪದಂ ಕುರುಕ್ಷೇತ್ರಂ ಪ್ರಯಾಗೆ ವಾರಣಾಸಿ ಅರ್ಘ್ಯತೀ-
ರ್ತ್ಥಗಳಲು ಸಾಯಿರ ಕಪಿಲೆಯ ಕೋಡುಂ ಕೊಳಗ್ಗಂ ಪೊನ್ನಲು ಕಟ್ಟಿಸಿ ಸಾಯಿರ ವೇ-
ದಪಾರಗರಪ್ಪ ಬ್ರಾಹ್ಮಣರ್ಗ್ಗೆ ಕೊಟ್ಟ ಫಳಮಕ್ಕು ಈ ಧರ್ಮ್ಮಮನಳಿದವರಾ ತೀ-
ರ್ತ್ಥದಲು ವೇದಪಾರಗರಪ್ಪ ಬ್ರಾಹ್ಮಣರುಮಂ ಕಪಿಲೆಯುಮುಮನಳಿದ ಮಹಾ-
ಪಾತಕಮಕ್ಕು ॥ ಸಾಮಾನ್ಯೋಯಂ ಧರ್ಮ್ಮಸೇತುರ್ನ್ನೃಪಾಣಾಂ ಕಾಲೇ ಕಾಲೇ ಪಾಲನೀ-
ಯೋ ಭವದ್ಭಿಃ। ಏತಾನಿ ಷಡ್ಭಾಗಿನಃ ಪಾರ್ತ್ಥಿವೇಂದ್ರಾ ಭೂಯೋ ಭೂಯೋ ಯಾ-
ಚತೇ ರಾಮಭದ್ರ॥ ಸ್ವದತ್ತಂ ಪರದತ್ತಂ ವಾ ಯೋ ಹರೇತಿ ವಸುನ್ಧರಾ[ಂ*] ಷಷ್ಟಿರ್ವ್ವ[ರ್ಷ]ಸಹಸ್ರಾ-
ಣಿ ವಿಷ್ಟಾಯಾಂ ಜಾಯತೇ ಕ್ರಿಮಿ [೩॥*]

## No. 189.

(*A.R. No.* 74 *of* 1904.)

On another slab set up on the west side of a ruined shrine close to the Kallesvara temple at Bagali, same taluk and district.

This is damaged and dated **Chālukya-Vikrama year 37, Nandana, Chaitra, amāvāsye, Ādityavāra, Sūrya-grahaṇa.** If Chaitra-Amāvāsye is taken as Amāvāsye preceding Chaitra or if the month is considered to be Pūrṇimānta then the equivalent of the date might be A.D. 1113 March 19 Wednesday, when there was a solar eclipse. The week day is, however, wrong even in this case. The record refers itself to the reign of the Chāḷukya king **Tribhuvanamalladēva** and mentions his feudatory **Tribhuvanamalla-Pāṇḍyadēva** as ruling over **Noḷambavāḍi thirtytwo-thousand.** The *Mahāmaleyāḷa-Vaḍḍavyavahāri* Ponmūrkhaseṭṭi is stated to have washed the feet of the Śaiva teacher Śivaśakti-Paṇḍita and granted, in the presence of the *Mahājanas* of **Bāḷguḷi,** *gadyāṇas* 14 for burning a perpetual lamp before the god Kalidēva.

1 ಸ್ವಸ್ತಿ [॥*] ಸಮಸ್ತಭುವನಾಶ್ರಯಂ ಶ್ರೀಪೃಥ್ವೀವಲ್ಲ . . . . . . . . . .
2 ಜ ಪರಮೇಶ್ವರ ಪರಮಭಟ್ಟಾರಕಂ . . . . . . . .
3 ಳಕಂ ಚಾಳುಕ್ಯಾಭರಣಂ ಶ್ರೀಮತ್ರಿಭುವ . . . . . . .
4 ಜಯರಾಜ್ಯಮುತ್ತರೋತ್ತರಾಭಿವೃದ್ಧಿಪ್ರವರ್ದ್ಧ . . . . .
5 [ವಾ]ರ್ಕ್ಕತಾರಂಬರಂ ಸಲುತ್ತಮಿರೆ ॥ ತತ್ಪಾದಪದ್ಮೋಪ . . . . . . . . .
6 . ತಪಂಚಮಹಾಶಬ್ದಂ ಮಹಾಮಣ್ಡಳೇಶ್ವರಂ ಕಾಂಚೀಪುರ . . . . .
7 ಯದುವಂಶಾಂಬರದ್ಯುಮಣಿ ಸುಭಟಚೂಡಾಮಣಿ . . .
8 ಳಕಮಳಮಾರ್ತ್ತಣ್ಡ ಪರಿಚ್ಛೇದಿಗಣ್ಡಂ ರಾಜಿಗಚೋಳಮನೋ . . .
9 ಶ್ರೀಮತ್ತ್ರಿಭುವನಮಲ್ಲದೇವಪಾದಾಬ್ಜಭೃಂಗಂ ನಾ . .
10 ಸಮಸ್ತಪ್ರಶಸ್ತಿಸಹಿತಂ ಶ್ರೀಮನ್ಮಹಾಮಣ್ಡಳೇ . .
11 ರಂ ತ್ರಿಭುವನಮಲ್ಲಪಾಣ್ಡ್ಯದೇವರ್ನ್ನೊಳಂಬವಾಡಿ
12 ಮೂವತ್ತರ್ಚ್ಛಾಸಿರಮುಮಂ ದುಷ್ಟನಿಗ್ರಹಶಿಷ್ಟಪ್ರತಿಪಾ-
13 ಳನ(ಂ)ಮ್ಮಾಡಿ ಸುಖದಿಂ ರಾಜ್ಯಂಗೆಯ್ಯುತ್ತಮಿರೆ ॥ ಸ್ವಸ್ತಿ ಯಮ-
14 ನಿಯಮಸ್ವಾಧ್ಯಾಯಧ್ಯಾನಧಾರಣಮೌನಾನುಷ್ಠಾನಜಪ-
15 ಸಮಾಧಿಗುಣಸಂಪನ್ನರಪ್ಪ ಶ್ರೀಮತ್ ಹರಿಶ್ಚಂದ್ರಪತಿಯಗ್ರ-
16 ಹಾರಂ ಬಾಳ್ಗಳಿಯೂರೊಡೆಯಪ್ರಮುಖಮಹಾಜ-
17 ನಮಯ್ವದಿಂಬರ ಸನ್ನಿಧಾನದೊಳ್ ಚಾಳುಕ್ಯವಿಕ್ರಮವರ್ಷ ೩೭-
18 ನೆಯ ನಂದನಸಂವತ್ಸರದ ಚೈತ್ರದಮಾವಾಸ್ಯೆ ಆದಿವಾರಂ
19 ಸೂರ್ಯ್ಯಗ್ರಹಣದಂದು ಸ್ವಸ್ತಿ ಸಮಸ್ತವಸ್ತುಗುಣಗಣಾ-
20 ಳಂಕಾರಚಾರುಚಾರಿತ್ರನಯವಿನಯಶೀಲಾಚಾರಸಂಪನ್ನರಪ್ಪ ಶ್ರೀ-
21 ನಿಡುಂಗಾಲ್ನಾಡ ಶ್ರೀಮನ್ಮಹಾಮಲೆಯಾಳವಡ್ಡವ್ಯವಹಾ-
22 ರಿ ಪೊನ್ಮ್ಮರ್ಖ್ಖಸೆಟ್ಟಿಯರ್ಸ್ಸಮಸ್ತಗುಣಸಂಪನ್ನರಪ್ಪ ಶ್ರೀ-
23 ಮತ್ಸಿವಶಕ್ತಿಪಣ್ಡಿತರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕ(ಂ)ಮ್ಮಾ-
24 ಡಿ ಶ್ರೀಸ್ವಯಂಭುಕಲಿದೇವಸ್ವಾಮಿದೇವರ್ಗ್ಗೆ-
25 ರಡು ನಂವಾದೀವಿಗೆ ನಡವಂತಾಗಿ ಬಿಟ್ಟ ಗದ್ಯಾಣಂ ೧೮
26 ಇನ್ತೀ ಧರ್ಮ್ಮಮಂ ಪ್ರತಿಪಾಳಿಸಿದವರ್ಗೆ ಪ್ರಯಾಗೆವಾರಣಾ-
27 ಸಿಕುರುಕ್ಷೇತ್ರದೊಳ್ಸಾಸಿರ್ವ್ವರ್ವ್ವೇದಪಾರಗರ್ಗ್ಗೆ ಸಾಸಿರ ಕಪಿಲೆ-
28 ಯನುಭಯಮುಖಿಗೊಟ್ಟ ಫಲಮಕ್ಕುಮಿದನಳಿದ-
29 ವರ್ಗ್ಗನಿತು ಕಪಿಲೆಯುಮನನಿತು ಬ್ರಾಹ್ಮಣರುಮನನಳಿದ ಮ-
30 ಹಾಪಾತಕಮಕ್ಕು ಸ್ವದತ್ತಾಂ ಪರದತ್ತಾಂ ವಾ ಯೋ ಹರೇ-
31 ತಿ ವಸುನ್ಧರಾಂ । ಷಷ್ಟಿರ್ವ್ವರ್ಷಸಹಶ್ರಾಣಿ ವಿಷ್ಟಾ-
32 ಯಾಂ ಜಾಯತೇ ಕ್ರಿಮಿಃ ॥

## No. 190.

(*A.R. No.* 406 *of* 1920.)

ON A SLAB SET UP NEAR AN OLD WELL AT PEDDAHOTURU, GOOTY TALUK, ANANTAPUR DISTRICT.

This is dated **Chālukya-Vikrama year 38, Vijaya, Kārtika, śu. 9, Budhavāra** probably corresponding to **A.D. 1113 October 20 Monday,** not Wednesday, as stated. It refers itself to the reign of the Chāḷukya king **Tribhuvanamalladēva,** ruling from **Manneyakeṟe** and states that **Komāra Tailapadēva** was ruling over **Sindavāḍi thousand.** At the request of the *Mahāmaṇḍalēśvara* **Daḷavaparasa,** *Sēnabōva* **Bāchirāja, Kētapa Gāvuṇḍa, Chāvuṇḍayya** and others, Tailapadēva is said to have made a gift of land, on account of a lunar eclipse, for a charity water-lift**(?)**.

1 ಶ್ರೀ ಸ್ವಸ್ತಿ [॥*] ಸಮಸ್ತಬುವನಾಸ್ರಅ ಶ್ರೀ-
2 ಪ್ರಿಥ್ವೀವಲ್ಲಭಂ ರಾಜಾಧಿರಾಜ ಪರಮೇಸ್ವರ
3 ಪರಮಭಟ್ಟರಖ ಸತ್ಯಾಸ್ರಯಕುಳತಿಳಕಂ
4 ಚಾಳುಕ್ಯಾಬರಣ ಶ್ರೀಮತ್ರಿಭುವನಮಲ್ಲದೇವರು
5 ಮನ್ನೆಯಕೆಱೆಯ ನೆಲೆವೀಡಿನೊಳು । ಸುಕಸಂಕತಾವಿ-
6 ನೋದದಿ ರಾಜ್ಯಂಗೆಯುತ್ತಲು ಶ್ರೀಚಾಳುಕ್ಯವಿಕ್ರಮವರೂ-
7 ಶದ ೩೯ ನೆಯ ವಿಜೆಅಸಜ್ವಚ್ಛರದ ಸ್ರಾಹೆಯಲು ಶ್ರೀಮ-
8 ತು ಕೊಮಾರಂ ತ್ರೈಲಪದೇವರ್ಗೆ ಸಿನ್ದವಾಡಿ ಸಾಯಿರವುಂ ಕಾರುಣ್ಯ-
9 ಂಗೆಯ್ದು ಕೊಡಲುಯವರು ತುಂಬುಳ ನೆಲವೀಡಿನಲು ಸಂಕ-
10 ತಾವಿನೋದದಿಂ ರಾಜ್ಯಂಗೆಯುತ್ತವಿರಲು ಚಿನ್ದ[ವಾಡಿ] ೯೬
11 ಬಳಿಯ ಗಡಿಯ ಪೊತೂರಲು ಶ್ರೀಮನು ಮಹಾಮ-
12 ಣ್ಡಳೇಸ್ವರಂ ದಳವಸರಸರ ಸೇನಬೋವ ಬಾಚಿರಾಜನು
13 ದಳಪರಾಜನುಂ ಮಾಡಿಸಿ ಧರ್ಮೀತಕ್ಕೆ ನಾಡ ಮನ್ನೆಯರು
14 ಸವುದರೆಗಳೂ ಇಯೂರ ಮುಲಿಗ ಚೋಳಗಾವುಣ್ಡರ ಬಮ್ಮ-
15 ಣ್ಣನ ಮಗ ಕೇತಪಗಾವುಣ್ಡನು ತಿಪುರಾನ್ತಕದಣ್ಡನಾಯ-
16 ಕರ ಸುಪುತ್ರ ಚಾವು[ಂಡ*]ಮಯ್ಯಪ್ರಮುಖಕರಣಂಗಳು ಬಿ-
17 ನ್ನಪಂಗೆಯ್ಯಲು ಕೊಮರ ತ್ರೈಲಪದೇವಂ ಇ ಧರ್ಮ್ಮೀತಕೆ ಆ
18 ಕಾರ್ತ್ತಿಕ ಸುದ್ದ ನವಮಿ ಬುಧವರಾದನ್ದು ಸೋಮಗ್ರಹ-
19 ಣನಿಮಿತ್ಯವಾಗಿ ಧರ್ಮ್ಮೀತಕ್ಕೆ ಬಿಟ್ಟ ದತ್ತಿ ಮತ್ತಗು ೫
20 ಮೂಱು ಸಿವಸ್ತಾನಕಂ ಮತ್ತರು ೧೦ ಇನ್ತೀ ಧರ್ಮ್ಮವಂ
21 ಪ್ರತಿಪಾಳಿಸಿದವರು ಸುಕಂ ರಾಜ್ಯಗೆವರು ಸುಕವಿಪ್ಪ-
22 ರು ಇ ಧರ್ಮ್ಮಕೆ ವಕ್ರವಾದವರು ನರಕಪ್ರಾಪ್ತರಪ್ಪರು
23 ನಾಡ ಬಣಜ ಧರ್ಮ್ಮೀತಕ್ಕೆ ಬಿಟ್ಟ ದತ್ತಿ ಕಚ್ಚವಡದಲು ಅಡ-
24 ಕೆ ೫ ಹೇಱಿನಲು ಎಲೆ ೫೦ ◎ ಸ್ವದತ್ತಬ್ವಾ ಪರದತ್ತಬ್ವಾ
25 ಏ ಹರೇತು ವಸುನ್ದರ । ಸಷ್ಟಿವರಿಶಸಹಸ್ರಾಣಿ ಯಿಷ್ಟ್ಯನ್ನ
26 ಜಾಯತೇ ಕ್ರಿಮಿ ॥ ಇನ್ತೀ ಧರ್ಮ್ಮವಂ ಕೆಡಿಸಿದವರು ವಾಣರಾ-
27 ಸಿಯಲು ಕವಿಲೆಅ(ಂ)ನಳಿದ ದೋಶ ಶ್ರೀ ॥
28 [1]ಸಕರಾಸಿಪ-
29 ಣ್ಡಿತ ಪ(ಹ)ಡದ ದತ್ತಿ[॥*]

## No. 191.

(*A.R. No.* 77 *of* 1904.)

ON THE 5TH SLAB SET UP IN THE KALLESVARA TEMPLE AT BAGALI, HARAPANAHALLI TALUK, BELLARY DISTRICT.

This is dated **Chāḷukya-Vikrama year 39, Jaya, Phālguṇa, puṇṇame, Sōmavāra, Sōma-grahaṇa,** corresponding to **A.D. 1115 February 10, Wednesday** (not Monday), when there was a lunar eclipse. It refers itself to the reign of the Chāḷukya king **Tribhuvanamalladēva** and states that while his feudatory, the *Mahāmaṇḍalēśvara* **Tribhuvanamalla-Pāṇḍyadēva** was ruling over **Noḷambavāḍi thirty-twothousand, Iśvarayyana-Māchakka** of the village **Yelekala** made a gift of *gadyāṇas* 20 for the service of the god Kalidēvasvāmi, after washing the feet of the teacher **Śivaśakti-Paṇḍita.** The gift was made in the presence of the *Mahājanas* of **Bāḷguḷi.**

1 ಸ್ವಸ್ತಿ [॥*]ಸಮಸ್ತಭುವನಾಶ್ರಯಂ ಶ್ರೀಪ್ರಿಥ್ವೀವಲ್ಲಭ ಮಹಾರಾಜಾಧಿರಾ-
2 ಜ ಪರಮೇಶ್ವರ ಪರಮಭಟ್ಟಾರಕಂ ಸತ್ಯಾಶ್ರಯಕುಳತಿಳಕಂ ಚಾ-
3 ಳುಕ್ಯಾಭರಣಂ ಶ್ರೀಮತ್ತ್ರಿಭುವನಮಲ್ಲದೇವರ ವಿಜ-

1 Lines 28 and 29 are written on the left margin of the stone.

4 ಯೆರಾಜ್ಯಮುತ್ತರೋತ್ತರಾಭಿವೃದ್ಧಿಪ್ರವರ್ದ್ಧಮಾನಮಾಚಂ-
5 ದ್ರಾರ್ಕ್ಕತಾರಂಬರಂ ಸಲುತ್ತಮಿರೆ ◎ ತತ್ಪಾದಪದ್ಮೋಪಜೀವಿ
6 ಸಮಧಿಗತಪಂಚಮಹಾಶಬ್ದಂ ಮಹಾಮ(ಂ)ಣ್ಡಳೇಶ್ವರಂ ಕಾಂಚೀ-
7 ಪುರವರಾಧೀಶ್ವರಂ ಯದುವಂಶಾಂಬರದ್ಯುಮಣಿ ಸುಭಟಚೂಡಾ-
8 ಮಣಿ ನಿಜಕುಳಕಮಳಮಾರ್ತ್ತಣ್ಡಂ ಪರಿಚ್ಛೇದಿಗಣ್ಡಂ ರಾಜಿಗಚೋಳಮ-
9 ನೋಭಂಗಂ ಶ್ರೀಮತ್ತ್ರಿಭುವನಮಲ್ಲದೇವಪಾದಾಬ್ಜಭೃಂಗಂ ನಾ-
10 ಮಾದಿಸಮಸ್ತಪ್ರಶಸ್ತಿಸಹಿತಂ ಶ್ರೀಮನ್ಮಹಾ-
11 ಮಣ್ಡಳೇಶ್ವರಂ ತ್ರಿಭುವನಮಲ್ಲಪಾಣ್ಡ್ಯದೇವನ್ನೊಳಂಬವಾ-
12 ಡಿ ಮೂವತ್ತಿರ್ಚ್ಛಾಸಿರಮುಮಂ ದುಷ್ಟನಿಗ್ರ-
13 ಹಶಿಷ್ಟಪ್ರತಿಪಾಳನಮ್ಮಾಡಿ ಸುಖದಿಂ ರಾಜ್ಯಂಗೆಯ್ಯು-
14 ತ್ತಮಿರೆ ◎ ಚಾಳುಕ್ಯವಿಕ್ರಮವರ್ಷದ ೩೯ ನೆಯ ಜಯಸಂ-
15 ವತ್ಸರದ ಫಾಲ್ಗುಣದ ಪುಣ್ಣಮೆ ಸೋಮವಾರ ಸೋಮಗ್ರಹಣ
16 ಬ್ಯತೀಪಾತಂ ಕೂಡಿದಂದು ಹರಿಶ್ಚಂದ್ರದತ್ತಿಯಗ್ರಹಾರ
17 ಬಾಳ್ಗುಳಿಯೂರೊಡೆಯಪ್ರಮುಖಮಹಾಜನಮಯ್ವ-
18 ದಿಂಬರ ಸನ್ನಿಧಾನದೊಳು ಸಮಸ್ತವಸ್ತುಗುಣಸಂಪನ್ನರಪ್ಪ
19 ಶ್ರೀಮತ್ಸಿವಶಕ್ತಿಪಣ್ಡಿತರ ಕಾಲಂ ಕರ್ಚ್ಚಿ ಧಾರಾಪೂರ್ಬ್ಬ-
20 ಕಂ ಮಾಡಿ ಯೆಲೆಕಲ ಬೊಜಂಗರ ಇಶ್ವರಯ್ಯನ
21 ಮಾಚಕ್ಕಂ ಶ್ರೀಸ್ವಯಂಭುಕಲಿದೇವಸ್ವಾಮಿದೇವ-
22 ರ ನಿವೇದ್ಯಕ್ಕೆ ಬಿಟ್ಟ ಗದ್ಯಾಣ ೨ಂ [ಇಂ*]ತೀ ಧರ್ಮ್ಮಮನಯ್ವ-
23 ದಿಂಬರು ಪ್ರತಿಪಾಳಿಸುವರ್ಪ್ರತಿಪಾಳಿಸಿದವರ್ಗ್ಗೆ
24 ಪ್ರಯಾಗೆವಾರಣಾಸಿಕುರುಕ್ಷೇತ್ರದೊಳ್ಸಾಸಿರ್ಬ್ಬ[ರ್ವ್ವೇ]ದಪಾ-
25 ರಗರ್ಗ್ಗೆ ಸಾಸಿರ ಕಪಿಲೆಯನುಭಯಮುಖಿಗೊಟ್ಟ ಫಲ-
26 ಮಕ್ಕುಮಿದನಳಿದವರಾ ಪುಣ್ಯಸ್ಥಾನದೊಳನಿತುಮನಳಿದ
27 ಮಹಾಪಾತಕನಕ್ಕು ◎ ಸ್ವದತ್ತಾಂ ಪರದತ್ತಾಂ ವಾ ಯೋ ಹರೇತಿ
28 ವಸುಂಧರಾಂ । ಷಷ್ಟಿವರ್ಷಸಹಶ್ರಾಣಿ ವಿಷ್ಟಾಯಾಂ ಜಾಯ-
29 ತೇ(ಕ) ಕ್ರಿಮಿಃ ।[।*]ಸಂದಾತಾತ್ಸುಮಹತ್ಸಖ್ಯಂ ದುಃಖಮ-
30 ನ್ಯತ್ರ ಪಾಲನಂ ದಾನಂ ವಾ ಪಾಲನಂ ವೇತಿ ದಾನಾತ್ಶ್ರೇಯೋನುಪಾಲನಾ (॥)
31 ತು ◎ ಮಂಗಳ ಮಹಾಶ್ರೀ ಶ್ರೀ

## No. 192.

(*A.R. No.* 98 *of* 1904.)

ON THE 14TH SLAB SET UP ON THE SOUTH SIDE OF THE SAME TEMPLE.

This is dated **Chālukya-Vikrama year 39, Jaya, Phālguṇa, puṇṇame, Sōmavāra, Sōma-grahaṇa,** corresponding to **A.D. 1115 February 10, Wednesday** (not Monday), when there was a lunar eclipse. It refers itself to the reign of the Chāḷukya king **Tribhuvanamalladēva** and states that, while **Tribhuvanamalla-Pāṇḍyadēva** was ruling over **Noḷambavāḍi thirty-two thousand** the *Daṇḍanāyaka* **Tikkabhaṭṭa** made a gift of the toll-revenue at the rate of two *hāgas* on every load of merchandise instead of one *hāga* as before, for feeding five Brāhmans in the *satra* every day, the balance, if any, being utilised for the repairs of the tank. Besides this, a grant of two *paṇas* per month, for offerings in the Brahma-Jinālaya, was made in the presence of **Śivaśakti-Paṇḍita.** The gift was made into the hands of **Śivamayya.**

It also registers another gift made in **Śaka 1020, Iśvara, Āshāḍha, amāvāsye Bṛihaspativāra, Sūrya-grahaṇa.** The date is irregular in many respects. The donor

was the same Tikaṇayya-Daṇḍanāyaka. He is said to have made a gift of 200 *kammas* of wet land for the service of the god Vīrakēśavadēva ; and the *Mahājanas* of the village made a gift of a garden of 60 *kammas* to the Purāṇa-reader **Īśvara-bhaṭṭōpādhyāya.** Evidently this gift was recorded subsequently.

1 ◎ ಸ್ವಸ್ತಿ [॥*] ಸಮಸ್ತಭುವನಾಶ್ರಯ ಶ್ರೀಪ್ರಿಥ್ವೀವಲ್ಲಭ ಮಹಾರಾಜಾಧಿರಾಜ ಪರಮೇ-
2 ಶ್ವರ ಪರಮಭಟ್ಟಾರಕ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ
3 ಶ್ರೀಮತ್ತ್ರಿಭುವನಮಲ್ಲದೇವರ ವಿಜಯರಾಜ್ಯಮುತ್ತರೋತ್ತರಾಭಿವ್ರಿ-
4 ದ್ಧಿಪ್ರವರ್ದ್ಧಮಾನಮಾಚಂದ್ರಾರ್ಕ್ಕತಾರಂಬರಂ ಸಲುತ್ತಮಿರೆ ತತ್ಪಾದಪದ್ಮೋಪಜೀ-
5 ವಿ ಸಮಧಿಗತಪಂಚಮಹಾಶಬ್ದ ಮಹಾಮಣ್ಡಳೇಶ್ವರಂ ಕಾಂಚೀಪುರವರಾ-
6 ಧೀಶ್ವರಂ ಯದುವಂಶಾಂಬರದ್ಯುಮಣಿ ಸುಭಟಚೂಡಾಮಣಿ ನಿಜಕುಳಕಮಳಮಾ-
7 ರ್ತ್ತಣ್ಡಂ ಪರಿಚ್ಛೇದಿಗಣ್ಡಂ ರಾಜಿಗಚೋಳಮನೋಭಂಗಂ ಶ್ರೀಮತ್ತ್ರಿಭುವನಮಲ್ಲದೇವಪಾದಾ-
8 ಬ್ಜಭ್ರಿಂಗಂ ನಾಮಾದಿಸಮಸ್ತಪ್ರಶಸ್ತಿಸಹಿತಂ ಶ್ರೀಮನ್ಮಹಾಮಣ್ಡಳೇಶ್ವರಂ
9 ತ್ರಿಭುವನಮಲ್ಲಪಾಣ್ಡ್ಯದೇವನ್ನೊಳಂಬವಾಡಿ ಮೂವತ್ತಿಚ್ಛಾಸಿರಮುಮಂ
10 ದುಷ್ಟನಿಗ್ರಹವಿಶಿಷ್ಟಪ್ರತಿಪಾಳನಂ ಮಾಡಿ ಸುಖದಿಂ ರಾಜ್ಯಂಗೆಯ್ಯು-
11 ತ್ತಮಿರೆ ಸಮಧಿಗತಪಂಚಮಹಾಶಬ್ದ ಮಹಾಸಾಮಂತಾಧಿಪ-
12 ತಿ ಮಹಾಪ್ರಚಣ್ಡದಣ್ಡನಾಯಕಂ ಸಿಷ್ಟೇಷ್ಟಜನಾಭೀಷ್ಟಫಳಪ್ರದಾಯ-
13 ಕಂ ಹರಚರಣಸರಸೀರುಹಮಧುಕರಂ ವಿನಯರತ್ನಾಕರಂ ನಿಯೋ-
14 ಗಯೋಗನ್ಧರಂ ಪತಿಕಾರ್ಯ್ಯಧುರನ್ಧರಂ ಚತುಸ್ಸಮಯಸಮುದ್ಧರಣಂ ವಿಶ್ವಾ-
15 ಮಿತ್ರಗೋತ್ರಪವಿತ್ರಂ ನಾಮಾದಿಸಮಸ್ತಪ್ರಶಸ್ತಿಸಹಿತಂ ಶ್ರೀಮ-
16 ನ್ಮಹಾಪ್ರಧಾನನಚ್ಛಪನ್ನಾಯದಧಿಷ್ಠಾಯಕಂ ದಣ್ಡನಾಯಕಂ ತಿಕ್ಕಭಟ್ಟರು
17 ಶ್ರೀಮಚ್ಚಾಳುಕ್ಯವಿಕ್ರಮವರ್ಷದ ೩೯ ನೆಯ ಜಯಸಂವತ್ಸರದ
18 ಫಾಲ್ಗುಣದ ಪುಣ್ಣಮೆ ಸೋಮವಾರ ಸೋಮಗ್ರಹಣಂ ಬ್ಯತೀಪಾತಂ ಕೂಡಿದಂ-
19 ದು ಸ್ವಸ್ತಿ ಸಮಸ್ತವಸ್ತುಗುಣಸಂಪನ್ನ ಶ್ರೀಮದುರ್ವ್ವರ ಶಿವಮ-
20 ಯ್ಯಂ ದಾನಮಂ ಪಡೆಯಲು ಸ್ವಸ್ತಿ ಯಮನಿಯಮಸ್ವಾದ್ಯಾಯಧ್ಯಾನಧಾರಣ-
21 ಮೌನಾನುಷ್ಠಾಣಪಾರಾಯಣಜಪಸಮಾಧಿವಸ್ತುಗುಣಸಂ-
22 ಪನ್ನರಪ್ಪ ಶ್ರೀಮತು ಹರಿಶ್ಚಂದ್ರದತ್ತಿಯಗ್ರಹಾರಂ ಬಾಳ್ಗಳಿ-
23 ಯೂರೊಡೆಯಪ್ರಮುಖಮಹಾಜನಮಯ್ವದಿಂಬ-
24 ರು ಸ್ವಸ್ತಿ ಸಮಸ್ತವಸ್ತುಗುಣಸಕಳಾಗಮಕುಶಲರಪ್ಪ ಶ್ರೀಮತ್ತ್ರಿವ-
25 ಶಕ್ತಿಪಣ್ಡಿತರ ಸನ್ನಿಧಾನದೊಳ್ ಶ್ರೀಸ್ವಯಂಭುಕಲಿದೇವಸ್ವಾಮಿ-
26 ಯ ದಿಬ್ಯಶ್ರೀಪಾದದೊಳ್ ಧಾರಾಪೂರ್ಬ್ಬಕ(ಂ)ಮ್ಮಾಡಿ ದೇವರ-
27 ಗ್ರಾಸನದ ಸತ್ರದಲಯ್ವರು ನಿರಂತರಮುಣ್ಬಂತಾಗಿ ಮಿಕ್ಕುದು ಪಿರಿ-
28 ಯಕೆಱೆಯ ಕೆಲಸಕ್ಕೆ ನಡೆವಂತಾಗಿಯೆರಸುವೇಱಿಂಗೆ ಮುನ್ನನ್ನಡವ ಪಾಗ-
29 ಮಲ್ಲದೆ ಮತ್ತೊಂದು ಪಾಗಮುಂ ಲಾವಣಿಗೆಯ ಪಣಮುಂ ಮತ್ತಂ ಬ್ರ-
30 ಹ್ಮಜಿನಾಲಯದ ದೇವರ ನಿವೇದ್ಯಕ್ಕ ತಿಂಗಳಿಂಗೆ ಯೆರಡು ಪಣಮುಮಂ ಬಿ-
31 ಟ್ಟನಿನ್ತೀ ಧರ್ಮ್ಮಮ ಪ್ರತಿಪಾಳಿಸಿದವರ್ಗ್ಗ ಪ್ರಯಾಗೆವಾರಣಾಸಿಕು-
32 ರುಕ್ಷೇತ್ರವರ್ಘ್ಘ್ಯತೀರ್ತ್ಥದೊಳ್ ಸಾಸಿರ್ವ್ವೇದಪಾರಗರ್ಗ್ಗ ಸಾಸಿರ ಕಪಿಲೆಯನ-
33 ಳಂಕಾರ(ಂ)ಮ್ಮಾಡಿಯುಭಯಮುಖಿಗೊಟ್ಟ ಫಳಮಕ್ಕುಮೀ ಧರ್ಮಮನ-
34 ೞಿದವರಾ ತೀರ್ತ್ಥಸ್ಥಾನದೊಳೆನಿಬರು ಬ್ರಾಹ್ಮಣರುವನನಿತು ಕಪಿಲೆ-
35 ಯುಮನೞಿದ ಮಹಾಪಾತಕಮಕ್ಕು ॥ ಸ್ವದತ್ತಾಂ ಪರದತ್ತಾಂ ವಾ ಯೋ
36 ಹರೇತಿ ವಸುನ್ಧರಾಂ । ಷಷ್ಟಿಂ ವರ್ಷಸಹಶ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿ[ಃ*] ॥
37 ಸಂ ದಾತಾತ್ಸುಮಹತ್ಸಖ್ಯಂ ದುಃಖಮನ್ಯತ್ರ ಪಾಲನಂ ದಾನಂ ವಾ
38 ಪಾಲನಂ ವೇತಿ ದಾನಾಚ್ಛ್ರೇಯೋನುಪಾಲನಾತು ॥ ಸ್ವಸ್ತಿ ಶ್ರೀ-
39 ಮತ್ಸಕವರ್ಷದ ೧೦೨೦ ನೆಯ ಈಶ್ವರ ಸಂವತ್ಸರದ ಆಷಾಢದಮಾಸೆ ಬ್ರಿಹಸ್ಪತಿವಾರ
40 ಸೂರ್ಯ್ಯಗ್ರಹಣ ವ್ಯತೀಪಾತ ಕೂಡಿದ ಪುಣ್ಯದಿನದೊಳು

41 ಶ್ರೀವೀರಕೇಶವದೇವರಿಗೆ ತಿಕಣಯ್ಯದಂಣಾಯಕರು ದೇವರಂಗಭೋಗರಂಗಭೋಗಕ್ಕಂ ಮೊಪ್ಪೆಯಕ-
ಟ್ಟದ

42 ಮೊದಲೇರಿಯ ಗದ್ದೆ ಕ ೨೦೦ ಚಿಂದೆಯಗೆಱೆಯ ಪಡುವಣ ಕೋಡಿಯ ಮಣಲಕೆಯಿ ಮತ್ತ ೧

43 ಶ್ರೀವೀರಕೇಶವದೇವರಿಗೆ ಸುಲಿಹಲ್ಲ ನಾರಸಿಂಹದೇವನು ಅಂಗಭೋಗರಂಗಭೋಗಕ್ಕೆ ಕೊಟ್ಟ ಮಣಲಕೆ-
ಯಿ ಚಿಂ-

44 ದೆಯಗೆಱೆಯ ಪಡುವಣ ಕೋಡಿಯಿಂ ಬಡಗಲು ಮತ್ತ ೧ ◎ ಸ್ವಸ್ತಿ ಶ್ರೀಮತು ಬಾಗುಳಿಯ ಮಹಾ-

45 ಜನಮಯ್ವದಿಂಬರು ಪುರಾಣದ ಈಶ್ವರಭಟ್ಟೋಪಾಧ್ಯಾಯರಿಗೆ ಸೋವನಾಯಕ ಕೊಟ್ಟ

46 ಕಟ್ಟದ ಕೆಱೆಯ ಕೆಳಗಣ ತೋಟ ಕಂಮ ೬೦ ಮ ಶ್ರೀಕಲಿದೇವರ ಬ್ರಹ್ಮಪುರಿಗಳಾ-

47 ಗಿ ಶ್ರೀಮಾನ್ಯವಾಗಿ ಸಲಿಸುವರು [।।*]

## No. 193.

(*A.R. No.* 700 *of* 1920.)

ON PILLAR OF THE TEMPLE OF ANANTABHOGESVARA AT KOLLUR, TENALI TALUK, GUNTUR DISTRICT.

The stone is mutilated and the beginning and the end of the record are lost. It is dated the cyclic year **Manmatha, the 40th year of the reign of the Chālukya king Tribhuvanamalladēva**, probably Vikramāditya VI (=**A.D. 1115-16**). The record refers to the brave Brāhman general **Anantapālayya** and mentions officers such as *Mantri, Purōhita, Sēnāpati, Dauvārika, Yuvarāja, Rāshṭrakūṭa* and *Kuṭumbin* in whose presence a gift was made by the king. The language of the record is partly Sanskrit.

1 . . ಪ್ರಸನ್ನಂ ನುಡಿದುಮತ್ತನ್ನಂ ಗೋತ್ರಪವಿತ್ರಂ ಪ . .

2 . ನಾಪುತ್ರಂ ತುರಗರೇವನ್ತಂ ವೈರಿಕೃತಾನ್ತಂ .

3 . ಸ್ತ ಪ್ರಶಸ್ತಿ ಸಹಿತ ಶ್ರೀಮದನಂತಪಾಲದೇ-

4 ವ ತ್ರಿಭುವನಮಲ್ಲದೇವಶ್ಚತ್ವಾರಿಂಶ-

5 ರಾಜ್ಯಸಂವತ್ಸರೇ ಮನ್ಮಥಸಮಾಖ್ಯೇ ಉ .

6 ನಯನನಿಮಿತ್ತ ಪೌಷ್ಯಶುದ್ಧೈಕಾದಶೀ ಶ . .

7 ರೇ ತ್ರಿಭೋಗಾಭ್ಯನ್ತರಂ ಸರ್ವ್ವಕಾರಪರಿ

8 . . . . ಮಂತ್ರಿಪುರೋಹಿತಸೇನಾಪ . .

9 ದೌವಾರಿಕಯುವರಾಜ್ಯರಾಷ್ಟ್ರಕೂಟಕುಟುಂಬಿ-

10 ಸಮಕ್ಷಂ ತ್ರಿಭುವನಮಲ್ಲದೇವೇನ ದತ್ತಮಿತಿ ವಿದಿ[ತ]-

11 ಮಸ್ತು ಚತುಶ್ಚತ್ವಾರಿಂಶತ್ಪ್ರಮಾಣ ಮಾನ . . [1]

## No. 194.

(*A.R. No.* 125 *of* 1913.)

ON A SLAB SET UP IN THE COURT-YARD OF THE SURYANARAYANASVAMI TEMPLE AT MAGOLA, HADAGALLI TALUK, SAME DISTRICT.

This is damaged and dated **Chālukya-Vikrama year 41, Durmukha, Pushya, (ba. 3?) Āditvāra, Uuttarāyaṇa-saṅkramaṇa,** corresponding to **A.D. 1116 December 24, Sunday.** It refers itself to the reign of the Chālukya king **Tribhuvanamalladēva.** Some gift seems to have been made for the service of the god (Sōmēśvaradēva). Again in the cyclic year Śārvari, on the day of Dīpāvaḷi, the two-hundred and the five-hundred (*Mahājanas*) are said to have granted some land for the service of the god Sōmēśvaradēva.

1 . . . . . ಜಯ . . . . . . . . . . . .

2 ಮೂ . . . . . . . . . . . .

---

[1] The inscription is broken after this.

3 ಸ್ವಸ್ತಿ ಸಮಸ್ತಭುವನಾಶ್ರಯಂ [ಶ್ರೀ ಪೃಥ್ವೀ]ವಲ್ಲಭಂ ಮ . ರಾಜಂ . . .

4 . . . ಮಭಟ್ಟಾ್ರ . . . . . . ಶ್ರಯ . . ಳಕ . . .

5 . . ಮತ್ರಿಭುವನ

6—17 Damaged.

18 ಮರಸಂ . . . . . . . . . . .

19 ತುಂಗ . . . . . . . . . .

20 ಹಾರಂ . . . . . . . . . .

21 . . ಸುತಮಿರೆ . . . . . . . . . . . . ವರ್ದ್ಧನನೆನಿಪಾ

22 . . . . ಬರ . . . . . . . . . . . . . ಶ್ರೀಮಚ್ಚಾಳುಕ್ಯ-

23 ವಿಕ್ರಮಕಾಲದ ೪೧ ನೆಯ [ದುರ್ಮ್ಮುಖಸಂ]ವತ್ಸರದ ಪುಷ್ಯ . . . . . . ಆದಿವಾರದು-

24 ತ್ತರಾಯಣಸಂಕ್ರಮಣದಂದು . . . . . . . . . .

25 ಮಹಾ . . . ಯರು . . ಯ್ದ . . .

26 . ದರ . . . . . . . . . . ತಮ್ಮ . . . ದೇವರ್ಗ್ಗೆ ನಿವೇ-

27 ದ್ಯಕ್ಕಂ ಅಂಗಭೋಗಕ್ಕಂ . . . . . . . . . ಮತ್ತರು ಕ ೪೫ . . . .

28 . . . ವಾರು . . . . . . . . . . ಈ ಧರ್ಮ್ಮಮನಿನ್ನೂರ್ವ್ವರುಂ

29 [ಪ್ರತಿ]ಪಾಳಿಸುವರು ॥ . . . . ವನಾ ಕಾದು ರಕ್ಷಿಸಿದಾತಂ (ಗಂ)ಗಂಗಾ-

30 ವಾರಣಾಸಿಕುರುಕ್ಷೇತ್ರಅರ್ಘ್ಯತೀರ್ತ್ಥದಲು ಸಾಸಿರ್ವ್ವರ್ವ್ವೇದಪಾರಗರಪ್ಪ ಬ್ರಾ-

31 ಹ್ಮಣರಿಗೆ ಸಾಸಿರ ಕವಿಲೆಯ ಕೋಡುಂ ಕೊಳಗು . . ಪಂಚರತ್ನಗಳಂ ಕಟ್ಟಿಸಿ

32 . . . ಭಯಮುಖಿ . . . . . . . . . ಈ ಧರ್ಮ್ಮಮನಳಿದಾತಂ

33 ವಾರಣಾಸಿಕುರುಕ್ಷೇತ್ರದಲು ಸಾಸಿರ್ವ್ವರ್ವ್ವೇದಪಾರಗರಪ್ಪ ಬ್ರಾಹ್ಮಣರುಮಂ ಸಾ-

34 ಸಿರ ಕವಿಲೆಯುಮಂ . . . . . . . . . ಪಾತಕನಕ್ಕು ॥ ಸ್ವದತ್ತಂ ಪರದತ್ತಂ ವಾ ಯೋ

35 ಹರೇತ ವಸುಂಧರಾ[ಂ*] ಷಷ್ಟಿರ್ವ್ವರುಷಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿ[ಃ*] ॥

36 ಸ್ವಸ್ತಿ ಶ್ರೀಮತು ಸಾರ್ವ್ವರೀಸಂವತ್ಸರದ ದೀಪಾವಳಿಗೆಯಲು ಶ್ರೀಸೋಮೇಶ್ವರ-

37 ದೇವರಿಗೆ ಯಿಂನೂರ್ವ್ವರುಂ ಪಯ್ನೂರ್ವ್ವರುಂ ನೆರೆದಿರ್ದ್ದು ದೇವ

38 . . ವಿಸ ಮ . . ಸ್ವರ . . ಯ . . ಧರ್ಮ್ಮಮನಿಂ . . [1]

## No. 195.

(*A.R. No.* 122 *of* 1913.)

On a slab set up at the entrance to the Narasimhasvami temple at Rangapuram, same taluk and district.

This is dated **Chālukya-Vikrama year 41, Durmakha, Pushya, śu.** (Śu. appears to be a mistake for ba.) **3, Ādityavāra, Uttarāyaṇa-saṅkrānti** corresponding to **A.D. 1116 December 24 Sunday.** It refers itself to the reign of the Chāḷukya king **Tribhuvanamalladēva.** While his queen **Padmaladēvi** was ruling over the *agrahāra* **Māṅgoḷa,** the warlike, religious and learned *Mahājanas* of the place, 200 in number, are said to have been enjoying the benefits of her rule. At the request of the *Mahājanas,* the queen ordered **Puḷiyama-Nāyaka** to make a gift of 11 *mattars* of land for the service of the god Narasiṅghadēva. The 120 *Mahājanas* of **Bidirapaḷḷi** made a grant of *gadyāṇas* 25 for the service of the same god. **Ichchiya-Nāyaka,** son of **Sōmēśvarabhaṭṭa** and his brother **Baladēva-Ghaisāsa** made a grant of land for the service of the same god. Again on Māgha śu. 5, Ādityavāra of the cyclic year Yuva (probably = A.D. 1155, January 5, Sunday) the *Mahājanas* with *Heggaḍe* **Liṅgayya** at their head, exempted the five *Tōṭigas* from taxes. This seems to be a later addition.

[1] One or two more lines seem to have been broken away.

ಶ್ರೀಕೃಷ್ಣಾಯ ನಮಃ ॥ ಜಯತ್ಯಾವಿಷ್ಕೃತಂ ವಿಷ್ಣೋರ್ವ್ವಾರಾಹಂ ಕ್ಷೋಭಿತಾರ್ಣ್ನ-
ವಂ ದಕ್ಷಿಣೋ(ಂ)ನ್ನತದಂಷ್ಟ್ರಾಗ್ರ(ಂ)ವಿಶ್ರಾಂತಭುವನಂ ವಪು[ಃ*] ॥
ಸ್ವಸ್ತಿ ಸಮಸ್ತಭುವನಾಶ್ರಯಂ ಶ್ರೀಪ್ರಿಥ್ವೀವಲ್ಲಭಂ ಮಹಾರಾಜಾಧಿರಾಜ
ಪರಮೇಶ್ವರಂ ಪರಮಭಟ್ಟಾರಕಂ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ ಶ್ರೀ-
ಮತ್ತ್ರಿಭುವನಮಲ್ಲದೇವರ ವಿಜಯರಾಜ್ಯಮುತ್ತರೋತ್ತರಾಭಿವ್ರಿದ್ಧಿಪ್ರವರ್ದ್ಧ-
ಮಾನಮಾಚಂದ್ರಾರ್ಕ್ಕತಾರಂಬರಂ ಸಲುತ್ತಮಿರೆ ॥ ಸ್ವಸ್ತಿಯನವರತಪರಮಕ-
ಲ್ಯಾಣಾಭ್ಯುದಯಸಹಸ್ರಫಳಭೋಗಭಾಗಿನೀ ದ್ವಿತೀಯಲಕ್ಷ್ಮೀಸಮಾನೆ ಕಳಹಂಸೆಯಾ-
ನೆ ಅಗಣ್ಯಪುಣ್ಯಲಾವಣ್ಯಲೀಲಾಲಂಕೃತ ಪರಿವಾರಕಲ್ಪಲತೆ ಅರ್ತ್ಥಿಜನಚಿಂತಾಮ-
ಣಿ ಗೋತ್ರಚೂಡಾಮಣಿ ಪ್ರತ್ಯಕ್ಷಪಾರ್ವ್ವತಿ ಪತಿಬ್ರತಾರುಂಧತಿ ಅಭಿನವಸರಸ್ವತಿ ರೂ-
ಪವಿದ್ಯಾಧರಿ ಸಕಳಕಳಾಧರಿ ಮಹಾಲಕ್ಷ್ಮೀದೇವೀಲಬ್ಧವರಪ್ರಸಾದೆ ದಾನವಿನೋದೆ
ಶ್ರೀಮತ್ತ್ರಿಭುವನಮಲ್ಲದೇವವಿಶಾಳವಕ್ಷಸ್ಥಳನಿವಾಸಿನಿಯರಪ್ಪ ಶ್ರೀಮ-
ತು ಪದ್ಮಲದೇವಿಯರು ಅಗ್ರಹಾರಂ ಮಾಂಗೊಳಮಂ ಸುಖಸಂಕಥಾವಿನೋದದಿಂದಾಳುತ್ತ-
ಮಿರೆ ॥ ಸ್ವಸ್ತಿ ಯಮನಿಯಮಸ್ವಾಧ್ಯಾಯಧ್ಯಾನಧಾರಣಮೋನಾನುಷ್ಠಾನಜಪಸಮಾಧಿ-
ಶೀಲಷಟ್ಕರ್ಮ್ಮಕ್ರಿಯಾನಿರತರನೇಕಯಜ್ಞಾ[ವ*]ಭ್ರಿತಾವಗಾಹನಪವಿತ್ರೀಕೃತಶರೀ-
ರರ್ವ್ವೇದವೇದಾಂಗೋಪಾಂಗನೇಕಶಾಸ್ತ್ರಾಷ್ಟಾದಶಧರ್ಮ್ಮಸಂಹಿತರು ಚತುರ್ದ್ದಶವಿದ್ಯಾಪಾರ-
ಗರಾಶ್ರಿತಜನಕಳ್ಪದ್ರುಮರಸಂಖ್ಯಾತಗುಣಗಣಾಳಂಕೃತರ್ಸ್ಸತ್ಯವಾಕ್ಯರು ಶರ-
ಣಾಗತವಜ್ರಪಂಜರರು ಶ್ರೀತುಂಗಭದ್ರಾದೇವಿಯ ದಕ್ಷಿಣತಟೋತ್ತರಶ್ರೀನಾರ-
ಸಿಂಘದೇವಪಾದಾರಾಧಕರಪ್ಪ ಶ್ರೀಮನ್ಮಹಾಗ್ರಹಾರಂ ಮಾಂಗೊಳದೂರೊಡೆಯ-
ಪ್ರಮುಖಮಹಾಜನವಿನ್ನೂರ್ವ್ವರುಂ ಐಕಮತ್ಯದಿಂ ದುಷ್ಟನಿಗ್ರಹಶಿಷ್ಟಪ್ರತಿಪಾ-
ಳನದಿಂದನುಭವಿಸುತ್ತಮಿರೆ ॥ ಸ್ವಸ್ತಿ ಶ್ರೀಮಚ್ಚಾಳುಕ್ಯವಿಕ್ರಮಕಾಲದ ೮೧ ನೆ-
ಯ ದುರ್ಮ್ಮುಖಿಸಂವತ್ಸರದ ಪುಷ್ಯ ಸುದ್ಧ ೩ ಆದಿತ್ಯವಾರ ಉತ್ತರಾಯಣಸಂಕ್ರಾ-
ನ್ತಿಯಂದು ಶ್ರೀಮದೂರೊಡೆಯಪ್ರಮುಖಮಹಾಜನವಿ(ಂ)ನ್ನೂರ್ವ್ವರು ಶ್ರೀಮತ್ಪದ್ಮಲ-
ದೇವಿಯರ್ಗ್ಗೆ ಬಿನ್ನಪಂಗೆಯ್ಯಲಾ ಬಿನ್ನಪಕ್ಕರಸಿಯರು ಕಾರುಣ್ಯಂಗೆಯ್ದು ಶ್ರಿ ನಾರ-
ಸಿಂಘದೇವರ್ಗ್ಗೆ ಸ್ನಾನನಿವೇದ್ಯಕ್ಕಂ ಅಂಗಭೋಗಕ್ಕಂ ನಡೆವ(ಂ)ನ್ತಪ್ಪ ಭೂಮಿಯಂ ಸ-
ರ್ವ್ವಬಾಧಾಪರಿಹಾರಮಾಗಿ ಬಿಟ್ಟನೆನೆಲು ಆ ಕಾರುಣ್ಯವಚನಮನಿನ್ನೂರ್ವ್ವರು
ಪಡೆಯಲು ಶ್ರೀನಾರಸಿಂಘದೇವರ್ಗ್ಗೆ ಪುಳಿಯಮನಾಯಕರು ಬಿಟ್ಟ ದೇವ-
ರ ಮೂಡಣ ಪಾಳಕೆಯಿ ಮಳಿ ಸವಡಿಪುಣಿಸೆಯ ಮಣಲಕೆಯಿ
ಮ ೭ ಅನ್ತು ಮತ್ತರು ೧೧॥ ಬಿದಿರಪಳ್ಳಿಯ ಊರಡೆಯಪ್ರಮುಖಮಹಾ-
ಜನಂ ನೂಱಇರ್ಪ್ಪದಿಂಬರ್ಗ್ಗೆ ಪೊಂಗೆ ಇರ್ಪ್ಪಣ ವ್ರಿದ್ಧಿಯಲು ಕೊಟ್ಟ ಗದ್ಯಾಣ ೨೫
ಸೋಮೇಶ್ವರಭಟ್ಟರ ಮಗಂ ಇಚಿಯನಾಯಕರುಂ ಅವರಣ್ಣ ಬಲದೇವಭ್ಯಸಾಸರು ಬಿಟ್ಟ
ಬಳ್ಳಲಲ್ಲಿಯ ಕೆಂಗಾಡು ಮ ೨ ಚಿಕ್ಕಗವುಂಡಗೆಱೆಯೊಳಗೆ ಮಣಲಕೆಯಿ ಮ ೩ ಮಾನಿ ಮ ೧
ಅಂಬಿಯಗೊಳದಲ್ಲಿ ಮ ೧ ಅನ್ತು ಮ ೭ ೩ ಧರ್ಮ್ಮಮನಿನ್ನೂರ್ವ್ವರುಂ ಪ್ರತಿಪಾಳಿಸುವರು
೩ ಧರ್ಮ್ಮಮನಾವನಾಗಿಯುಂ ಕಾದು ರಕ್ಷಿಸಿದಾತ ಪ್ರಯಾಗೆವಾರಣಾಸಿಗುರುಕ್ಷೇತ್ರ-
ವರ್ಘ್ಯತೀರ್ತ್ಥದಲು ಸಾಸಿರ್ವ್ವವ್ವೇದಪಾರಗರಪ್ಪ ಬ್ರಾಹ್ಮಣರಿಗೆ ಸಾಸಿರ ಕವಿಲೆಯ ಕೋಡುಂ
ಕೊಳಗುಮ ಪಂಚರತ್ನದಿ ಕಟ್ಟಿಸಿ ಯುಭಯಮುಖಿಗೊಟ್ಟ ಮಹಾಪುರುಷನಕ್ಕು ॥
ಈ ಧರ್ಮ್ಮಮನಳಿದಾತಂ ಪ್ರಯಾಗೆವಾರಣಾಸಿಗುರುಕ್ಷೇತ್ರದಲು ಸಾಸಿರ್ವ್ವವ್ವೇದ(ವೇದ)-
ಪಾರಗರಪ್ಪ ಬ್ರಾಹ್ಮಣರುಮಂ ಸಾಸಿರ ಕವಿಲೆಯ್ಮ ಕೊಂದ ಮಹಾಪಾತಕನಕ್ಕು ॥
ಸ್ವದತಂ ಪರದತಂ ವಾ ಯೋ ಹರೇತಿ ವಸುಂಧರಾ[ಂ*] ಷಷ್ಟಿ ವ್ವರ್ಷಸಯಶ್ರಾಣಿ ವಿಷ್ಠಾ-
ಯಾಂ ಜಾಯತೇ ಕ್ರಿಮಿ[ಃ*] ॥ ಯುವಸಂವತ್ಸರದ ಮಾಘ ಸುದ್ಧ ಪಂಚಮಿ ಆದಿ-
ತ್ಯವಾರದಂದು ಶ್ರೀನರಸಿಂಘದೇವರ ಕಂಮರದೊಳೆರಡು ತೋಟಗರು ಮೂ-
ವರು ಅನ್ತು ೫ ವರ್ಗ್ಗ ತಪ ಸರ್ಬ್ಬಬಾಧಪರಿಹಾರವಾಗಿ ಹೆಗ್ಗಡೆ ಲಿಂಗಯ್ಯ-
ಪ್ರಮುಖವಾಗಿ ಅಶೇಷಮಹಾಜನ[ವಿನ್ನೂ]ರ್ಬ್ಬರು ಮಾನ್ಯಮಂ ಬಿಟ್ಟರು ॥

## No. 196.

(*A.R. No.* 819 *of* 1922.)

ON A PILLAR SET UP OPPOSITE THE CHENNAKESVARA TEMPLE AT KOMMURU, BAPATLA TALUK, GUNTUR DISTRICT.

This is damaged and dated **Chālukya-Vikrama year 43, Viḷambi, Pushya, śu. 5, Sōmavāra, Uttarāyaṇa-saṅkramaṇa.** The date is irregular. Pushya śu. 5 of Viḷambi corresponded to A.D. 1118 December 19 Thursday, not Monday, and Uttarāyaṇa-sankramana in that year fell on December 25. The inscription refers itself to the reign of the Chāḷukya king **Tribhuvanamalladēva** and states that, while the *Mahāsāmāntādhipati Mahaprachaṇḍadaṇḍanāyaka* **Anantapālayya** was ruling over **Vēṅgi fourteen-thousand,** a certain Nāyaka made a gift of *gadyāṇas* 6 for keeping a perpetual light before god Agastēśvaradēva of **Kommūru.**

1 ನಮಸ್ತುಂಗಸಿರಶ್ಚುಂಬಿಚಂದ್ರಚಾ-
2 ಮರಚಾರವೇ ತ್ರೈಳೋಕ್ಯನಗರಾರಂ-
3 ಭ(ಂ)ಮೂಳಸ್ತಂಭಾಯ ಸಂಭವೇ॥
4 ಸ್ವಸ್ತಿ ಸಮಸ್ತಭುವನಾಸ್ರಯ ಶ್ರೀ-
5 ಪ್ರಿಥ್ವೀವಲ್ಲಭ ಮಹಾರಾಜಾಧಿರಾ-
6 ಜ ಪರಮೇಸ್ವರ ಪರಮಭಟ್ಟಾರ-
7 ಕಂ ಸತ್ಯಾಸ್ರಯಕುಳತಿ-
8 ಳಕಂ ಚಾಳುಕ್ಯಾಭರಣಂ
9 ಶ್ರೀಮತ್ರಿಭುವನಮಲ್ಲದೇವ-
10 ರ ವಿಜಯರಾಜ್ಯಮುತ್ತರೋ-
11 ತ್ತರಾಭಿವ್ರಿದ್ಧಿಪ್ರವರ್ದ್ಧಮಾ-
12 ನಮಾಚಂದ್ರಾರ್ಕತಾರಂಬ-
13 ರಂ ಸಲುತ್ತಮಿರೆ ತತ್ಪಾದ-
14 ಪದ್ಮೋಪಜೀವಿ ಸಮಧಿಗತ-
15 ಪಂಚಮಹಾಸಬ್ದ ಮಹಾಸಾಮ(ಂ)-
16 ನ್ತಾಧಿಪತಿ ಮಹಾಪ್ರಚ(ಂ)ಣ್ಡ-
17 ದಣ್ಡನಾಯಕಂ ವಿಬುಧವರ-
18 ದಾಯಕಂ ಸುಜನಪ್ರಸನ್ನಂ
19 ನುಡಿದುಮತ್ತನ್ನಂ ಗೋತ್ರಪವಿ-
20 ತ್ರಂ ಪರಾಂಗನಾಪುತ್ರಂ ತುರೆಯ-
21 ರೇವಂತ ವೈರಿಕ್ರಿತಾನ್ತ ಸಾಹಸೋ-
22 ತ್ತುಂಗಂ ಅಯ್ಯನಸಿಂಗಂ ನಾಮಾದಿಸ-
23 ಮಸ್ತಪ್ರಸಸ್ತಿಸಹಿತಂ ಶ್ರೀಮ-
24 ನುಮಹಾಪ್ರಧಾನಂ ಭಾಣಸವೆ-
25 ಗ್ಗಡೆ ಮನೆವೆಗ್ಗಡೆ ದಣ್ಡನಾಯಕ
26 ಅನನ್ತಪಾಳೈಯ್ಯಂಗಳು ಬೇಂಗಿ ಪ-
27 ದಿನಾಲ್ಕು ಸಾಸಿರಮುಮಂ
28 ದುಷ್ಟನಿಗ್ರಹಸಿಷ್ಟಪ್ರ-
29 . ಪಾಳನೆಯಿ(ಂ)ನ್ದ-
30 . ತ್ತಮಿರೆ . . ದಲಿ
31 . . . . . ಳಗ
32 . . . . . ಗ್ಗದ
33 . ಳ . . . . ವದಾನ ಕೊ(ಂ)-
34 ಮ್ಮೂರ ಶ್ರೀಮದಗಸ್ತೇ-
35 ಸ್ವರದೇವರ್ಗ್ಗೆ । ◎
36 ಕೇತಪೊಂಟ ನಾವಯ
37 ಶ್ರೀಮಂಚಾಳುಕ್ಯವಿಕ್ರಮವ-
38 ರಿಷದ ೪೩ ನೆಯ ವಿಳಂ-
39 ಬಿಸಂವತ್ಸರದ ಪುಷ್ಯ ಸುದ್ಧ
40 ಪಂಚಮಿ ಸೋಮವಾರ ಉತ್ತ-
41 ರಾಯಣಸಂಕ್ರಮಣನಿ-
42 ಮಿತ್ಯದಲು ಅಖಣ್ಡನಂದಾ-
43 [ದೀ]ವಿಗೆಗೆ ಕೊಟ್ಟ ಉತ್ತಮ-
44 . . ನ ಪೊನ್ನ ಗದ್ಯಾಣ
45 ಆಱು ಅಂಕದೊಳಂ
46 ಗದ್ಯಾಣ ೬ ಈ ಧರ್ಮ್ಮ
47 ಕೊ(ಂ)ಮ್ಮೂರ ಮೂನೂರ್ವ್ವ-
48 ರುಂ ನಡಸುವರು ಇ ಧರ್ಮ್ಮ-
49 ವನಾವನೋರ್ವ್ವಂ ಪ್ರತಿಪಾಳಿಸಿದ-
50 ವಂ ಗಂಗೆಯ ತಡಿಯಲು ಸಾಸಿ-
51 ರ ಕವಿಲೆಯ ಕೋಡುಂ ಕೊಳಗಿನ-
52 ಲುಂ ಪೊನ್ನುಂ ಮಾಣಿಕದಲು ಕಟ್ಟಿ .
53 ಸಕಳವೇದಪಾರಗರಪ್ಪ . .
54 ಹ್ಮಣರಿಗೆ ಕೊಟ್ಟ ಫಳ . . .
55 ಳದಾತಂ ಸಾಸಿರ ಕವಿ . .
56 ಗಂಗೆಯಲು ಅಳಿದಾ . .
57 ಸ್ವದತ್ತಂ ಪರದ . . .
58 ರೇತ . . . [ಷಷ್ಠಿ] . .
59 ರ್ಷಸ . . . . . .
60 ಜಾಯತೇ ಕ್ರಿಮಿ . . . .
61 ಓಂ ನಮಃ . . .
62 ಕೊಮ್ಮಣಾ . . .
63 ಲಿಕಿತಂ , . .

*Bhaṇḍāri* **Sōvarasa,** who was the *Mahāpradhāna* of **Padumaladēvī,** the chief queen of the Hoysaḷa king, is stated to have made a grant of some land for the service of god Āhavamallēśvara of **Hiriya-Kuṟuvatti.**

1 ಸ್ವಸ್ತಿ [॥*] ಶ್ರೀಮತು ಯಾದವನಾರಾಯಣಂ ಪ್ರತಾಪಚಕ್ರವರ್ತ್ತಿ ಹೊಯ್ಸಣ ವೀರಬಲ್ಲಾಳದೇವ- ವರ್ಷದ ೧೫ ನೆಯ ಕ್ರೋಧನಸಂ-

2 ವತ್ಸರದ ಜೇಷ್ಟ ಸುದ್ಧ ಪೌರ್ಣ್ನಮಿಯಾದಿವಾರ ಸೋಮಗ್ರಹಣ ವ್ಯತೀಪಾತದಂದು ಪಟ್ಟಮಹಾ- ದೇವಿ ಪದುಮ-

3 ಲದೇವಿಯರ ಮಹಾಪ್ರಧಾನಂ ಭಂಡಾರಿ ಸೋವರಸರು ಶ್ರೀಮದ್ದಕ್ಷಿಣವಾರಣಾಸಿ ಹಿರಿ-

4 ಯಕುಱುವತ್ತಿಯ ಶ್ರೀಯಾಹವಮಲ್ಲದೇವರ ನೈವೇದ್ಯಕ್ಕೆ ತಂಮಾಳುವ ಗುತ್ತೊಳಲ-

5 ನಾಡ ಚಿಕ್ಕಕುಱುವತ್ತಿವೂರಿಂ ಮೂಡಲು ಬೆಳನಕುಱುವದಿಂ ಪಡುವಲು ಗುಂಗಹೊಲದ ಕ-

6 ಳಿದೇವರ ಕೆಯ್ಯಿಂ ತೆಂಕಲು ಗುತ್ತೊಳಲ ದಾರಿಯಿಂ ಮೂಡಣ ಸ್ಥಳದಲ್ಲಿ ಶ್ರೀಮದ್ರಾಜಗು-

7 ರು ಲೋಕಾಭರಣದೇವರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಮಾಡಿ ಕೊಟ್ಟ ಯೆರೆ ಗುತ್ತೊಳಲ

8 ಗಡಿಬದಿಂ ಮತ್ತ ೬ ಈ ಧರ್ಮ್ಮ[ವಂ ಆ] ನಾಡರಸುಗಳುಂ ಯಲ್ಲಿ ಯಾವುದುಂ ತಪ್ಪದೆ ಪ್ರತಿಪಾ-

9 ಳಿಸುವರು ಮಂಗಳ ಮಹಾಶ್ರೀ . . . . . . . ಲು ಸಹಶ್ರಕವಿ .

10 . . . . . . . . . . . . ಈ ಧರ್ಮವನಳಿದವರು

11 . . . . . . . . . . . . . . ಕರಕ್ಕು ॥

## No. 326.

(*A.R. No.* 739 *of* 1922.)

ON A SLAB SET UP IN THE MANDAPA OF THE KUMARASVAMI TEMPLE ON THE KUMARASVAMI HILL NEAR SANDUR, SANDUR STATE.

The record is dated **Śaka 1127, Krōdhana, Phālguṇa, ba. amāvāsye, Vaḍḍavāra, Sūrya-grahaṇa,** corresponding to **A.D. 1206, March 11, Saturday,** when there was a solar eclipse. It belongs to the reign of the Hoysaḷa king **Vīra-Ballāḷa (II).** Under his orders, his chief minister and commander of the army, **Mahadēva-Daṇḍanāyaka,** restored the grant of the village **Keṟeyapaḷḷi,** which **Kṛishṇarāja** of the **Rāshṭrakūṭa** family had made formerly for daily offerings to the god Shaṇmukha, and placed it in the charge of **Vishṇukara-Brahmachāri.** There is a eulogy in verse of the **Yādava** race in the beginning of the record.

*First Face.*

1 ✧ ಸ್ವಸ್ತಿ ಶ್ರೀಜಯಾಭ್ಯುದಯಶ್ಚ । ಬ್ರ-

2 ಹ್ಮಸ್ಕಂದಾಯ ನಮಃ ॥ ಜಯತ್ಯಾ-

3 ವಿಷ್ಕೃತಂ ವಿಷ್ಣೋರ್ವ್ವಾರಾಹಂ ಕ್ಷೋಭಿ- ತಾರ್ಣ್ನವಂ ದ-

4 ಕ್ಷಿಣೋನ್ನತದಂಷ್ಟ್ರಾಗ್ರವಿಶ್ರಾನ್ತಭುವ-

5 ನ[ಂ*] ವಪುಃ ॥ ಶ್ರೀಮದುಮಾನನ್ದನನ ಖಿಳಾ-

6 ಮರಸೇನಾಧಿಪತಿ ಮಯೂರರಥ ಸುತ್ರಾ ಮಮಣಿ-

7 ಮುಕುಟರಂಜಿತಕೋಮಳಪದನೊಸೆದು ಮಾಳ್ಕೆ ನಿಮ-

8 ಗಭಿಮತಮಂ ॥ ಖ್ಯಾತಂ ಬ್ರಹ್ಮಜನತ್ರಿ- ಯತ್ರಿತನ-

9 ಯಂ ಸೋಮಂ ಸುಧಾಸೂತಿಸಂಭೂತಂ ಙಂ ಬು-

10 ಧಸೂನು ಪೂರುನರಪಂ ತತ್ಸೂನು ತಾನಾ- ಯು

11 ತಜ್ಜಾತಂ ತನ್ನಹುಷಂ ಯಯಾತಿ ನಹು- ಷಾಪತ್ಯಂ

12 ಯಯಾತ್ಯಾತ್ಮಸಂಜಾತಂ ತಾಂ ಯದು

13 ಯಾದವಾನ್ವಯಮದಂತಾಯಾತನಿಂ- ಲೋಕ-

14 ದೊಳ್ । ವಿಭವಾಮರೇಂದ್ರನೂರ್ಜ್ಜಿತ- ಶುಭತುಂ-

15 ಗಂ ಜಿತವಿರೋಧಿ ಯಾದವವಂಶಜಪ್ರಭವಂ ಭೂ-

16 ಭುವನೈಕಪ್ರಭು ರಟ್ಟರಮೇರು ಕೃಷ್ಣ- ರಾಜಂ ನೆಗ-

17 ಳ್ದಂ ॥ ಅಸುಹೃದ್ಭೂಪಾಲಭೊಭೃದ್ದ-
ಳನ-
18 ಪಟುಪವಿಪ್ರಖ್ಯದೋರ್ದ್ದಂಡನುದ್ದಂಡ-
ಸಮ-
19 ಗ್ರೋಗ್ರಾರಿಸೇನಾಧವದವದಹನಂ ವಿ-
20 ಕ್ರುತಾರಾತಿಭೂಪಪ್ರಸರಾಂಭೋರಾಶಿಕುಂ-
ಭೋ-
21 ದ್ಭವನಮಳಯಶಂ ಧರ್ಮ್ಮಧರ್ಮ್ಮಾತ್ಮ-
ಜಾತಂ ಪೆ-
22 ಸರ್ವೆತ್ತಂ ಕೃಷ್ಣಭೂಪಾಲಕನತು-
23 ಳಬಳಂ ಗಂಡಮಾರ್ತ್ತಣ್ಡದೇವಂ ॥ ಆತಂ
ವಿಶೇಷ-
24 ಭಕ್ತಿಸಮೇತಾತ್ಮಂ ಷಣ್ಮುಖಂಗೆ ನೈವೇ-
25 ದ್ಯಾರ್ತ್ಥಂ ಪ್ರೀತತಟಾಕ ನಾಮ ಖ್ಯಾತ-
ಗ್ರಾ-
26 ಮಮನೂನಗುಣನಿಧಿ ಯಿತ್ತಂ ॥
27 ಮತ್ತಂ ॥ ಬ್ಯಾಳಗುಣಾನ್ವಿತಾರಿಗಜಕೇ-
ಸರಿ ವೈ-
28 ರಿನೃಪಾಬ್ಧ ಮಾಳಿಕಾಭೀಳತರಾನಿಳಂ ರಿ-
29 ಪುಮಹೀಪತಿಭೂಜಕುಠಾರನುಗ್ರಭೂ-
30 ಪಾಲಕುಭೃನ್ನಿಕಾಯಕುಳಿಶಾಯುಧನಾ-
ನತ-
31 ಶತ್ರು ವೀರಬಲ್ಲಾಳನನೂನಯಾದವಕುಲ
ಪ್ರ-
32 ಭವಂ ಪೆಸರ್ವೆತ್ತನುರ್ವ್ವಿಯೊಳ್ ॥ ತತ್ಪಾದ
ಪದ್ಮೋ-
33 ಪಜೀವಿ ॥ ಮನಸಿಜಮೂರ್ತ್ತಿ ಮಾಗಧ-
ಜ-
34 ನಾಮರಭೋಜನಶೇಷವೈರಿಕಾನನದವಪಾವ-
ಕಂ
35 ರಿಪುಫಣೀಂದ್ರಗರುತ್ಮನರಾತಿದಣ್ಡನಾಥನಿ-
ಕರ-
36 ಕಂಜಕುಂಜರನನೂನಯಶೋನಿಧಿ ಸೋಮ
37 ಸೈಕಬಾವನೀ ಮಹದೇವಮಂತ್ರಿ ನೆಗಳ್ದಂ
ಶರಣಾ-
38 ಗತವಜ್ರಪಂಜರಂ ॥ ಪುರುಷಾರ್ತ್ಥದ ಕಣಿ
. .
39 ನಾಭರಣಂ ಕೇದಾರದೇವದಿವ್ಯಶ್ರೀಪದ-
[ಯು]-
40 [ಗ]ಸರಸಿಜಭೃಂಗಂ ಶರಣಾಗತವಜ್ರಪಂ
ಜ[ರಂ]

*Second Face.*

41 ಪೆಸರ್ವೆತ್ತಂ ॥ ಬಿರುದಂಕಭೀ-
42 ಮನಾನತವಿರೋಧಿ ಬಲ್ಲಾಳ-
43 ಭೂಮಿಪಾಲಕಪಾದಾಂ-
44 ಭೋರುಹೋಪಜೀವಿ ನೆಗಳ್ದಂ
45 ಶರಣಾಗತವಜ್ರಪಂ-
46 ಜರ[ಂ*] ಮಹದೇವಂ ॥
47 ಸ್ವಸ್ತಿ ಸಮಸ್ತಭುವನಾ-
48 ಶ್ರಯಂ ಶ್ರೀಪ್ರಿಥ್ವೀವಲ್ಲಭ
49 ಮಹಾರಾಜಾಧಿರಾಜ
50 ಪರಮೇಶ್ವರಂ ಪರಮಭ-
51 ಟ್ಟಾರಕಂ ಯಾದವಕುಲಾಂ-
52 ಬರದ್ಯುಮಣಿ ಸಮ್ಯ್ಯ-
53 ಕ್ತ್ವಚೂಡಾಮಣಿ ಮಲೆ-
54 ರಾಜರಾಜಂ ಮಲಪರೊಳ್ಗಂ-
55 ಡಂ ಕದನಪ್ರಚಂಡನಸಹಾ-
56 ಯಶೌರ್ಯ್ಯ ಶನಿವಾರಸಿ-
57 ದ್ಧಿ ಗಿರಿದುರ್ಗ್ಗಮಲ್ಲ ನಿ-
58 ಶ್ಶಂಕಪ್ರತಾಪಚಕ್ರ-
59 ವರ್ತ್ತಿ ಹೊಯ್ಸಳರಾ-
60 ಯ ವೀರಬಲ್ಲಾಳದೇವ-
61 ನಖಂಡಭೂಮಣ್ಡಳಮಂ
62 ನಿಜಭುಜದಣ್ಡಮಣ್ಡ-
63 ತಮಂಡಳಾಗ್ರದಿ-
64 ನಂಡಿಗೆ ಸಾಧ್ಯಂ ಮಾಡಿ ತುಂ-
65 ಗಭದ್ರಾನದೀತೀರದ ಮ-
66 ಧುವನದ ನೆಲೆವೀಡಿನೊ-
67 ಳ್ಸುಖಸಂಕಥಾವಿನೋದ-
68 ದಿಂ ರಾಜ್ಯಂಗೆಯ್ಯುತ್ತ-
69 ಮಿರೆ ॥ ೞ ಸ್ವಸ್ತಿ ಸ-
70 ಮಸ್ತಪ್ರಶಸ್ತಿಸಹಿತಂ
71 ಶ್ರೀಮನ್ಮಹಾಪ್ರಧಾನಂ ಸೇನಾ-
72 ಪತಿ ಬಾಹತ್ತರನಿಯೋ-
73 ಗಾಧಿಪತಿ ಯನೇಕದೇಶಾ-
74 ಧಿಪತಿ ಸಕಳಲಕ್ಷ್ಮೀಪತಿ
75 ಶರಣಾಗತವಜ್ರಪಂಜ-
76 ರ ಕೇದಾರದೇವದಿವ್ಯಶ್ರೀಪಾ-
77 ದಾರಾಧಕನುಂ ಪರಬಳ-
78 ಸಾಧಕನುಮಪ್ಪ ಮ-ಹ-
79 ದೇವದಂಡನಾಯಕಂ

*Third Face.*

80 ನಿಜಸ್ವಾಮಿಯಪ್ಪ ವೀರಬಲ್ಲಾಳದೇವನಾ-
ಜ್ಞೆಯಿಂ ಶಕ-
81 ನೃಪವರ್ಷದ ೧೧೨೭ ನೆಯ ಕ್ರೋಧನ-
ಸಂವ-
82 ತ್ಸರದ ಫಾಲ್ಗುಣ ಬಹುಳದಮಾವಾಸ್ಯೆ
ವಡ್ಡವಾರ-
83 ದಂದು ಸೂರ್ಯ್ಯಗ್ರಹಣನಿಮಿತ್ತಂ

84 ಮುಂನಂ ಶ್ರೀಸ್ವಾಮಿದೇವಗ್ಗೆ೯ ಕೃಷ್ಣರಾ-
ಜಂ ಕೊಟ್ಟ ॥
85 ಅನ್ನಾತ್ಥಧರ್ಮ್ಮಂ ಬಹುಕಾಲಾನ್ತದೊಳನ್ತ-
86 ರಿಸಲದನೆ ಬಲ್ಲಾಳಮಹೀಕಾಂತಾಮಾತ್ಯಂ
87 ಸ್ಥಿರಮಪ್ಪನ್ತು ಪುನದ್ವ೯ತ್ತಮಾಗಿ ವಿನ-
ಯದಿ-
88 ನಿತ್ತಂ ॥ ಅಚಳಿತಧೈರ್ಯ್ಯಂ ಮಹದೇವ-
89 ಚಮೂಪಂ ಕೆಱೆಯಪಳ್ಳಿಯಂ ಕುಡಲೊ-
90 ಡವಾರ್ಯ್ಯಚರಿತ ವಿಷ್ಣುಕರಬ್ರಹ್ಮಚಾರಿ
ಪಡೆ-
91 ದಂ ಗುಹಂಗೆ ನೈವೇದ್ಯಾತ್ಥ೯ಂ ॥ ಜಿಷ್ಣು-
ಪ್ರ-
92 ಮುಖಂ ಸುರಾಚ್ಚಿ೯ತವಿಷ್ಣುಪದಾಂ-
ಭೋಜ-
93 ಮಧುಕರಂ ಸಕಳಕಳಾನಿಷ್ಣಾತಂ ಪೆಸವೆ೯-
ತ್ತಂ
94 ವಿಷ್ಣುಕರಬ್ರಹ್ಮಚಾರಿದೇವಂ ಧರೆಯೊಳ್ ॥
95 ಆ ಕೆಱೆಯಪಳ್ಳಿಯ ಪಶ್ಚಿಮಸೀಮಾ-
96 ಪ್ರಮಾಣಮಾ ಊರಿಂ ಹೊಂನ್ನೊಱೆಯಪಳ್ಳಿ-
97 ಗೆ ಹೋದ ಕಾಲ್ವಟ್ಟೆಯಿಂ ತೆಂಕಲಿದ್ದ೯
ಬೆಳ್ಗುಪ್ಪೆ ಆ
98 ಕುಪ್ಪೆಯಿಂ ನೈತು ಬಡಗ[1]ಲ್ ಲಖ್ಖೆಯ-
99 ನಕಟ್ಟೆ ಆ ಊರ ಉತ್ತರಸೀಮಾಪ್ರಮಾ-
100 ಣಂ ಸಂಡೂರಿಂ ತೆಂಕಲಿದ್ದ೯ ಒಱವಿನಕು-
ಪ್ಪೆ ಆ ಕುಪ್ಪೆ-
101 ಯಿಂ ಮೂಡಲ್ ಕಡವಿನಬೆಂಚೆ ಆ ಊರ
ಪೂ-
102 ರ್ವ್ವಸೀಮಾಪ್ರಮಾಣಂ ತೆಂಕಮುಂತಾಗಿ
ಪರ್ವ್ವದ ದೇವಗಿರಿ
103 ಆ ಊರ ದಕ್ಷಿಣಸೀಮಾಪ್ರಮಾಣ [॥*]
ವಿಶೇಷೋಕ್ತಿ
104 ಪ್ರಯೋಜಕಮಲ್ಲೆರಡೆಡೆಗಂ ಸ್ವಾಮಿ-
ಭೇದಮಿಲ್ಲ-
105 ಪ್ಪುದು ಕಾರಣಮಾಗಿ ॥ ಕುರುಗುಹಕಾ-
106 ಶೀಕ್ಷೇತ್ರೋತ್ಕರದೊಳ್ ಸೂರ್ಯ್ಯೋ-
ಪರಾಗವಾಗು-
107 ತ್ತಿರೆ ಸಾಸಿರಕಪಿಲೆಗಳಂ ದ್ವಿಜಗಾದರ-
ದಿಂದಂ ದಕ್ಷಿ-
108 ಣಾನ್ವಿತಂ ಕೊಟ್ಟ ಫಲಂ ॥ ಸಮನಿಕು-
ಮೊಲವಿಂದೀ ಧರ್ಮ್ಮ-
109 ಮನಾರಯ್ದೊಡೆ ಕಡಂಗಿ ಕಿಡಿಸಿದೊಡಾ
ಗೋಸ-
110 ಮುದಯಮಂ ದ್ವಿಜರುಮನಳಿದ ಮಹಾ
ಪಾತ-
111 ಕಮನೆಯ್ದುಗುಂ ತತ್ಕ್ಷಣದೊಳ್ ॥ ಸ್ವ-
ದತ್ತಾಂ ಪರ-
112 ದತ್ತಾಂ ವಾ ಪಾಲಯನ್ತಿ ವಸುಂಧರಾಂ
ಯೆ-
113 ಸ್ಯ ಯಸ್ಯ ಯದಾ ಭೂಮಿಸ್ತಸ್ಯ ತಸ್ಯ
ತದಾ ಫಲಂ ॥
114 ಸ್ವದತ್ತಾಂ ಪರದತ್ತಾಂ ವಾ ಯೋ
ಹರೇತ ವಸುಂಧ-
115 ರಾಂ ಷಷ್ಟಿವ್ವ೯ರ್ಷಸಹಸ್ರಾಣಿ ವಿಷ್ಠಾ-
ಯಾಂಜಾಯ-
116 ತೇ ಕ್ರಿಮಿಃ ॥ ಗಾಮೇಕಾಂ ರತ್ನಿಕಾ-
ಮೇಕಾಂ ಭೂಮೇ-
117 ರಪ್ಯೇಕಮಂಗುಲಂ ಹರಂನರಕಮಾ-
ಪ್ನೋತಿ ಯಾ-
118 ವದಾಭೂತಸಂಪ್ಲವಂ ॥ ಶಾಸನಮಿದೇವುದೆ-
119 ಲ್ಲಿಯ ಶಾಸನಮಾರಿತ್ತರೇಕೆ ಸಲಿಸುವೆ
ನಾನೀ ಶಾಸ-
120 ನಮನೆಂಬ ಪಾತಕ ಭಾಸುರತರ ರೌರವ-
ಕ್ಕೆ ಗಳಗ-
121 ಳನಿಳಗುಂ ॥ ಮಂಗಳ ಮಹಾಶ್ರೀ ❖

## No. 327.

(*A.R. No.* 55-D *of* 1904.)

ON A SLAB SET UP UNDER A MARGOSA TREE AT KUDATINI, BELLARY TALUK, SAME DISTRICT.

This is dated the cyclic year **Prabhava, Āshāḍha, ba. 15, Bṛihavāra,** corresponding to **A.D. 1207 July 26, Thursday** in the reign of the Hoysaḷa king **Vīra-Ballāḷa (II).** Unfortunately the record is damaged. All that can be gathered is that, under the presidency of **Vishṇukara-Brahmachāri,** a learned ascetic, the five *Vargas,* the *Eḷkōṭi-Mahādēvas,* the numberless *gaṇas* and the *Mummuridaṇḍas* assembled together and resolved that breach of conduct and offences should be referred to the local *tapōdhana i.e.,* Vishṇukara- Brahmachāri.

1 ಸ್ವಸ್ತಿ[॥*] ಶ್ರೀವಿಜ-
2 ಯಾಭ್ಯುದ-
3 ಯಶ್ಚೈತ್ರವ ॥

---

[1] ಗ is written below the line with a *kākapada*.

4 ಸ್ವಸ್ತಿ [।।*] ಸಮಧಿಗತ ಶ್ರೀ[ಸ್ವಾ]-
5 ಮಿಕಾರ್ತ್ತಿಕೇಯತಪೋವನಾಧಿಪತಿ-
6 ಯಪ್ಪ ವಿಷ್ಣುಕರಬ್ರಹ್ಮಚಾರಿಮುಖ್ಯ ಸ್ಥಾನದ-
7 ಯ್ದುವರ್ಗ್ಗಮುಂ ಶ್ರೀಎಳ್ಕೋಟಿಮಹಾದೇವರುಂ ಅ-
8 ಸಂಖ್ಯಾತಗಣಂಗಳುಂ ಮುಂಮುರಿದಂ-
9 ಡಂಗಳು ನೆರದು ಮಾಡಿದಾಜ್ಞೆಯ ಸಾಸನ
10 ಎಂತೆಂದಡೆ ಊರಿಗೆ ಅನ್ಯಾಯ ಅವಾಂತರ ಬಂ-
11 ದಡಂ ಸ್ಥಾನಿಕರು ತಪೋಧನರ ಸಂಮತ . ನಡೆವಂತಾ-
12 ಗಿ ಭೂಮಿಯನೂ . . . . ವೋತಮಿ
13 . . . . . . . . ದಂಡಂಗ . . . . ತಪೋಧನರ ನಾ .
14 . . . . . . . . ರ್ತಿಗಂ ಜಾತಿಗಂ ಬಹಿ
15 ಸ್ವಸ್ತಿ ಶ್ರೀಮತು ಯಾದವನಾರಾಯಣ ಪ್ರತಾಪಚಕ್ರವರ್ತ್ತಿ
16 ಹೊಯಿಶಣ ವೀರಬಲ್ಲಾಳದೇವವರ್ಷದ ಪ್ರಭವಸಂವತ್ಸರದ
17 ಆಶಾಡ ಬ ೧[೫] ಬ್ರಿಹವಾರದಲು . . ಬಾವಿ ಸಕಲಪರಿ . .
18 . . . . . ಮಿತಿಸಹಿತಂ ಪ್ರತಿಪಾಳಿಸುವರು[।।*]

## No. 328.

(*A.R. No.* 261 *of* 1918.)

ON A HERO-STONE SET UP IN THE COURT-YARD OF THE RAMALINGASVAMI TEMPLE AT CHIGATERI, HARAPANAHALLI TALUK, SAME DISTRICT.

The record is damaged and dated **Śaka 1132 Śukla, Jyēshṭha, śu. 5, [Ādivāra]= A.D. 1209 May 10, Sunday.** It belongs to the reign of the Hoysaḷa king **Vīra-Ballaḷa** (II) and states that **Pommayya,** the chief of **Chaṇḍūru** died in a battle (?)

1 ಸ್ವಸ್ತಿ ಶ್ರೀಮತು ಪ್ರತಾಪಚಕ್ರವರ್ತ್ತಿ ಹೋಸಣ ವೀರಬಲ್ಲಾಳದೇವನ ರಾಜ್ಯದಲು ಸಕವರುಷ ೧೧೩೨ ಶುಕ್ಲಸಂವತ್ಸರದ
2 ಜೇಷ್ಠ ಸುದ್ಧ ೫ ಆ ಶ್ರೀಮತು ಚಿಕ್ಕಟಿ . . . . . . . . . . . . . ಚಂಡು-ರೊಡೆಯ . . . . . .
3 ಪೊಂಮಯ್ಯ . . . .ಹಿಂವಿಕ್ಕಿ ಮಾಳಗೆ . . . . . . . . . [ಜಿತೇ]ನ ಲಭ್ಯತೇ ಲಕ್ಷ್ಮೀಃ ಮ್ರಿತೇನಾಪಿ ಸುರಾಂಗ-
4 ನಾ ಕ್ಷಣವಿಧ್ವಂಸಿನೇ ಕಯ್ಕೇ ಕಾ ಚಿಂತಾ ಮರಣೇ ರಣೇ ।। ಮಂಗಳ ಮಹಾಶ್ರೀ ಶ್ರೀ ।।

## No. 329.

(*A.R. No.* 123 *of* 1913.)

ON A SLAB SET UP IN THE SURYANARAYANASVAMI TEMPLE AT MAGALA, HADAGALLI TALUK, SAME DISTRICT.

The inscription is dated **Śaka 1131, Śukla, Śrāvaṇa, śu. 15, Sōmavāra, Sōmagrahaṇa, Karkaṭaka-saṅkrmaṇa, Vyatīpāta,** corresponding to **A.D. 1209 July 18 Saturday** when there was a lunar eclipse; the week-day cited in the record is an error. The record refers itself to the reign of the Hoysaḷa king **Vishṇuvardhana Ballāḷa (II),** who was ruling over **Gaṅgavāḍi ninetysix-thousand, Noṇaṁbavāḍi thirtytwo-thousand Banavase twelve-thousand, Huligeṟe three-hundred,** the two **Beḷuvalas,** and **Māsavāḍi** up to **Herdoṟe.** When he was camping at **Haḷḷavura** surnamed **Vijayasamudra, Marmarasa,** son of the Brāhman **Kāḷimayya,** who was one of the 200 Brāhman *svāmis* of **Māṅgoḷa,** built a *trkiūṭa* temple for the gods Śiva, Vishṇu and Sūrya; and **Siṅgayya,** who was the *Bhaṇḍāri* and the 200 *Mahājanas* of Māṅgoḷa made grants of land (boundaries specified) for the service of the gods. The *arasu* title

borne by the Brāhman Marma is noteworthy . The warlike spirit of the 200 Brāhmans is described as that of Indra in war The genealogies of the king, of Marmarasa and of Siṅgamayya are given. It also records other gifts made to the same temple.

1 ಸ್ವಸ್ತಿ ಶ್ರೀಜರ್ಜಯಾಭ್ಯುದಯಶ್ಚ ॥ ನಮಸ್ತುಂಗಶಿರಶ್ಚುಂಬಿ । ಚಂದ್ರಚಾಮರಚಾರವೇ । ತ್ರೈಳೋ-
ಕ್ಯನಗರಾರಂಭ(।)ಮೂಲಸ್ತಂಭಾಯ ಶಂಭವೇ ॥

2 ಜಯತ್ಯಾವಿಃಕೃತಂ ವಿಷ್ಣೋ । ವಾರಾಹಂ ಕ್ಷೋಭಿತಾರ್ಣ್ಣವಂ । ದಕ್ಷಿಣೋನ್ನತದಂಷ್ಟ್ರಾಗ್ರ ।
ವಿಶ್ರಾಂತಭುವನಂ ವಪುಃ ॥ ಓಂ ನಮಃ ಶಿವಾಯ ॥

3 ಶ್ರೀಸೋಮೇಶಃ ಸದಾ ಪಾಯಾ । ತ್ಪ್ರಸಂನಃ ಕೇಶವೋ ವಿಭುಃ । ಭಾಸ್ಕರಃ ಸುರವಿಖ್ಯಾತಃ ಮರ್ಮ್ಮರಾ-
ಜಂ ಮಹಾಪ್ರಭುಂ ॥ ಶ್ರೀಶಂಕರ ॥

4 ಸ್ವಸ್ತಿ ಸಮಸ್ತಭುವನಾಶ್ರಯಂ ಶ್ರೀಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರಂ । ದ್ವಾರವತೀ-
ಪುರವರಾಧೀಶ್ವರಂ ಯಾದ-

5 ವಕುಳಾಂಬರದ್ಯುಮಣಿ । ಸಮ್ಯಕ್ತ್ವಚೂಡಾಮಣಿ । ಮಲೆರಾಜರಾಜ । ಮಲೆಪರೊಳ್ಗಂಡ । ಕದನಪ್ರಚಂ-
ಡ । ನೇಕಾ [ಂ*]ಗವೀರ । ನಸಹಾಯ-

6 ಶೌರ್ಯ್ಯ । ಶನಿವಾರಸಿದ್ಧಿ ಗಿರಿದುರ್ಗ್ಗಮಲ್ಲ । ಚಲದಂಕರಾಮ । ನಿಶ್ಶಂಕಪ್ರತಾಪಚಕ್ರವರ್ತ್ತಿ ಹೊ-
ಯ್ಸಣ ವಿಷ್ಣುವರ್ದ್ಧನವೀರಬಲ್ಲಾಳುದೇವನ ರಾ-

7 ಜಾನ್ವಯಮೆನ್ತೆಂದಡೆ ॥ ವೃತ್ತ ॥ ಸರಸಿಜನೇತ್ರನಿಂದಬ್ಜಸಂಭವನಂಬುಜಸಂಭವಾಂಕನಿಂ ವರಮೆನಿಪತ್ರಿ-
ಯತ್ರಿಯ ವಿಳೋಚನದಿಂದಮ ಸೋಮ ಸೋ-

8 ಮನಿಂ ಸುರುಚಿರಮಾದ ಸೋಮವಿಭವಾನ್ವಯ ಭೂಪ ಯದುಪ್ರಭಾಖ್ಯನಿಂ ಸ್ಥಿರಮದು ಯಾದವಾ-
ಹ್ವಯಕುಳೋದ್ಭವಮಾದುದು

9 ಭೂತಳಾಗ್ರದೊಳು ॥ ಯದುವಂಶಾಂಬರಭಾನು ದಕ್ಷಿಣಧರಾಧೀಶಾ(ಂ)ನ್ವಯಂ ಪೇಳ್ವಡಂತದು ವೈಚಿ-
ತ್ರ್ಯಮದೆಂತುಟೆಂದಡೆ ನೃಪಪ್ರ-

10 ಖ್ಯಾತಶೋಭಾಕರಾಸ್ಪದನೊರ್ಬ್ಬಂ ಸಳನೆಂಬ ಭೂಪತಿ ಹಿಮಾಂಶುಚ್ಛಾಯೆಯಂ ತಾಳ್ದ ತಂದದ ನೋ-
ಡಲು ಶಶಕಾಪುರಕ್ಕೆ ಮು-

11 ದದಿಂ ಬಂದಂ ಕುಮಾರೋತ್ತಮಂ ॥ ಬಂದು ಕುಲಾಧಿದೇವತೆ ವಸನ್ತಿಕೆಯಂಘ್ರಿಸರೋಜಮಂ ಕುಭೃನ್ನಂ-
ದನನರ್ಚ್ಚಿಸುತ್ತಮಿ-

12 ರಲುದ್ಘನಖಾಸ್ತ್ರನಡುತ್ತುರ್ತ್ತ ಪಾಯೆ ಸಿದ್ಧಂ ದಯೆಯಿಂದೆ ಕೊಟ್ಟ ಸೆಳೆಯಿಂ ಪುಲಿಯಂ ಮಿಗೆ ಪೊಯ್ಸ-
ಳೆಂದೊಡಾಟಂದಲಿನಿತ್ತ ಹೊಯ್ಸ-

13 ಣಕುಳಾನ್ವಯರಾದರಿಳಾತಳಾಗ್ರದೊಳು ॥ ಕಂದ ॥ ವಿಳಸದ್ವಿಶಿಷ್ಟಹೃದ್ಯಾಬ್ಜ್ಯಕುಳದ ತಮಂ ಪರೆಯೆ
ಹೊಯ್ಸಣಾನ್ವಯಭೂ-

14 ಭೃತ್ಕುಳದಿಂದಮೊಗೆದು ನಿಜಭುಜಬಲದೆ ಜಗಚ್ಚಕ್ಷುವೆನಿಪ ವಿನಯಾದಿತ್ಯಂ ॥ ವಿನಯಾದಿತ್ಯನ ರಾಜ್ಯ-
ದಿನನನ್ತರಂ ನಿಖಿಳಧಾತ್ರಿ-

15 ಗೆಱೆಯಂ ತಾನೆಂಬನಿತು ಗುಣದಾತ್ಮಜಂ ಭೂವಿನುತಂ ರಾಜ್ಯಪ್ರಯುಕ್ತನೆಱೆಯಂಗನೃಪಂ ॥ ಕ್ಷಿತಿಪತಿ-
ಯೆಱೆಯಂ-

16 ಗುದ್ಯೆತ್ಸತಿ ಯೇಚಲದೇವಿಗಾತ್ಮಜರ್ಪುಟ್ಟಿದರಪ್ರತಿಮತರವಿಷ್ಣುವರ್ದ್ಧನ ನುತನುದಯಾದಿತ್ಯಭೂಪ
ಬಲ್ಲಾಳನೃಪಂ ॥

17 ಮತ್ತಮವರೊಳಗೆ ವಿಷ್ಣುವರ್ದ್ಧನದೇವಂಗೆ ಪಟ್ಟಂ ॥ ಶ್ರೀವಿಷ್ಣುವರ್ದ್ಧನಂಗಂ ಭೂವಿಶ್ರುತೆ ಲಕ್ಷ್ಮದೇವಿ-
ಗಂ ಪುಟ್ಟಿದ ಕೀರ್ತ್ತ್ಯವನಿತೆಗಧಿಪ ಯದುಕುಳದೇವಂ

18 ವೈರೀಭಕುಳನೃಸಿಂಹನರೇಂದ್ರಂ ॥ ಆ ನರಸಿಂಹನೃಪಂಗಂ ಪೀನಸ್ತನೆ ಪಟ್ಟದರಸಿ ಯೇಚಲದೇವಿ ಭೂನು-
ತೆಗೆ ಪುಟ್ಟಿದಂ ಕ್ಷಿತಿಪಾನಮ್ರ-

19 ಪದಾಬ್ಜ ವೀರಬಲ್ಲಾಳನೃಪಂ ॥ ಆತನ ಪರಾಕ್ರಮಮೆ[ಂ*]ತ್ತೆಂದಡೆ ॥ ವೃತ್ತ ॥ ವಿದ್ವಿಷ್ಟವ್ರಾತಜಾತ-
ಕ್ಷಿತಿಪತಿವಿಜಿತಾಶೇಷವಿಕ್ರಾನ್ತಬಾ-

20 ಹುಃ । ಸದ್ವಿದ್ಯಾಘಪ್ರೌಢಗೂಢಪ್ರಭವನಿಖಿಳಶಸ್ತ್ರಾಸ್ತ್ರಸಂಪಾದಿತಾಖ್ಯ । ತದ್ವಿಖ್ಯಾತಪ್ರಸನ್ನಪ್ರಕಟ-
ದಿಕ್ತಟಾಲಂಬಿತೋದ್ಯದ್ವಿಭಾಸಃ [ । * ]

21 ಸದ್ವಾಕ್ಯೇ ಸೂರ್ಯ್ಯಸೂನುರ್ವ್ವಿಜಯತಿ ಭುವನೇ ವೀರಬಲ್ಲಾಳಭೂಪಃ ॥ ಚಲದಂಕರಃ ಮನರಿನೃಪ-
ಕುಳಕುರುಸಂದೋಹಭೀಮನುದ್ಧತರಾ-

22 ಮಂ ಲಲನಾಕದಂಬಕಾಮಂ ಮಲೆರಾಜಪ್ರತಿಮಾನತಿಬಳಂ ಬಲ್ಲಾಳಂ ॥ ಆ ಬಲ್ಲಾಳಮಹೀಪಾಳ[ಂ*]
ಗಂಗವಾಡಿ ತೊಂಬತ್ತಱುಸಾಸಿರ ನೊಣಂಬವಾ-

23 ಡಿ ಮೂವತಿಛಾಯಿರ ಬನವಸೆ ಪನ್ನಿಛಾಯಿರ ಹುಲಿಗೆಱೆ ಮೂನೂಱು ಬೆಳುವಲವೆರಡು ಮಾಸವಾಡಿ
ಹದ್ಮೆಱೆಪರ್ಯ್ಯನ್ತಂಬರವಾಳುತ್ತ ವಿಜಯ-

24 ಸಮುದ್ರ(ಂ)ಮೆನಿಪ ಹಳ್ಳವುರ ನೆಲವೀಡಿನ ಬಿಟ್ಟಿದುರ್ಗ ದುಷ್ಟನಿಗ್ರಹಶಿಷ್ಟಪತ್ರಿಪಾಳನಂ ಮಾಡಿ ಸುಖದಿ
ರಾಜ್ಯಂಗೆಯ್ಯುತ್ತಮಿರಲು ॐ

25 ತತ್ಪಾದಪದ್ಮೋಪಜೀವಿ ॥ ಭಂಡಾರಿಸಿಂದವಿಪ್ರೇಶ । ಭವತೋ ರಾಜ್ಯಸಂಪದಾ । ವಿದುಷಾಮರ್ತ್ಥಿಸಾ-
ರ್ತ್ಥಾನಾಂ । ಕಲ್ಪವೃಕ್ಷಾಯಿತಂ ಭುವಿ ॥ ಕಂದ ॥ ಪಾಳ-

26 ಡವಿಗಳೂರಾದಪುವಾಳುವ ಕಾಲುವಳ್ಳಿ ನಗರವಾದಪುವೆನೆ ತಾಂ ಪಾಳಿಸುವನುರ್ಬ್ಬಿಯಂ ಬಲ್ಲಾಳನ
ಭಂಡಾರಿ ಸಿಂಗನಂ ಬಯಸದರಾರು ॥ ಓಂ ನಮ ।

27 ॐ ಸ್ವಸ್ತಿ ಶ್ರೀಮದನವರತಸುರುಚಿರವಿಳಸದಮಳಕಮನೀಯಜಗದ್ವಳಯಕಳಿತಬಹಳಾಯಮಾನ
ದುಗ್ಧಾರ್ಣ್ನವನವರುಚಿರಕಾನ್ತಿಕಾ-

28 ನ್ತಾರ್ಥಕ್ಕರಸೌಂದರಿತಸ್ಫುರಿತಚಂದ್ರಾತಪವರ್ಣ್ನನಿರ್ನ್ನಿಕ್ತವ್ಯಕ್ತತರಶೋಭಾಕರಸತ್ಕೀರ್ತ್ತಿಲಕ್ಷ್ಮೀ-
ಮುಖಕುಮುದವಿಕಾಸೇಂದುಪ್ರಭರುಂ । ನಿಖಿಳಮನು-

29 ಮುನಿಸನ್ನಿಭರುಂ। ಯಮನಿಯಮಪ್ರಾಣಾಯಾಮಪ್ರತ್ಯಾಹಾರನಿಜಕೃತ್ಯಕ್ರಿಯಾಕರಣಾನುರಕ್ತಸ್ವಾಂ-
ತಃಕರಣಪರಿಣತಿವಿಶೇಷ-

30 ಪರಾಕೃತಪ್ರತ್ಯವಾಯರುಂ । ಸತ್ಯರಾಧೇಯರುಂ । ಮನೋಹರಾಯಮಾನದಕ್ಷಿಣಭೂಕಾನ್ತಾಕಚರುಚಿ-
ರಸಂಶೋಭಿತಕುನ್ತಳದೇಶಮಧ್ಯವ-

31 ರ್ತ್ತಿಯಶೋವರ್ತ್ತಿನೊಣಬವಾಡಿದ್ವಾತ್ರಿಂಶತ್ಸಹಸ್ರಾಭಿಧಾನಶಿರೋರತ್ನಾಯಮಾನಮಾಂಗೊಳಗ್ರಾ -
ಮಾಧಿಪತಿಗಳುಂ ಪ್ರತ್ಯಕ್ಷಸರಸ್ವತಿಗಳುಂ

32 ಶ್ರೀಮದ್ವರಾಹದೇವಪ್ರೋದ್ಭೂತತುಂಗಭದ್ರಾಜಳಸ್ನಾನಪವಿತ್ರೀಕೃತಗಾತ್ರರುಂ । ವಿಬ್ಧಪಂಕಜಮಿತ್ರ-
ರುಂ ಶ್ರೀಮದಖಿಳದಿವಿಜಮೌಳಿ-

33 ಮಣ್ಡನಮಣಿಪ್ರಭಾವಿಕಸಿತಪಾದಾರವಿನ್ದದ್ವಂದ್ವಶ್ರೀಯೋಭಗವತೋನೃಕೇಸರರನವರತಪೂಜಾತತ್ಪರ -
ರುಂ । ಮೇರುಸನ್ನಿಭ-

34 ಸ್ಥಿರರುಂ । ಕುಟಿಳಕುಮತಪರವಾದಿನಿರ್ದ್ದಳಿತಪಟುತರಪ್ರಕಟಿತನಿಖಿಳವಿದ್ಯಾನಿಕೇತನಸರಸ್ವತೀನಿಟಳ-
ಜಟಿಳತತಿಳಕಾಯಮಾನಕಟ-

35 ಕಮರ್ದ್ದನದೇವಣಾಖ್ಯಪ್ರವಿಷ್ಟಾಧಿಷ್ಠಿತ ಶಿಷ್ಟಸಂವರ್ದ್ಧನಪ್ರಸನ್ನರಿನ್ಪೂರ್ವ್ವಸ್ವಾ[ಗ]ಮಿಗಳ ಸತ್ಕೀ -
ರ್ತ್ತಿಯನ್ತೆಂದಡೆ ॥ ವೃತ್ತ ॥ ತ್ಯಾಗೇ ಕಳ್ಪಮಹೀ-

36 ರ್ಹಸ್ಸುಲಲಿತಃ ಸ್ವಾತ್ಮೋಪಭೋಗೇ ಹರಿಃ । ಸಾಹಂಕಾರಸಮಗ್ರಸೌಖ್ಯವಿಭವೇ ಸಂಕ್ರನ್ದನಸ್ಸಂ-
ಯ್ಯುಗೇ । ಶ್ರೌತಸ್ಮಾರ್ತ್ತನಿಯುಕ್ತಕರ್ಮ್ಮನಿಯ

37 ತೌ ಬ್ಯಾಸೋಪಮಃ ಸರ್ಬ್ಬದಾ। ಶ್ರೀಮನ್ಮಾಗೊಳದ ದ್ವಿಜಾತಿನಿವಹಃ ಸಂಸ್ತೂಯತೇ ಭೂತಳೇ॥ ಪರ-
ಹಿತರಾಗಿಯುಂ ಪರಭಯಂಕರರುಂ । ಹರಿಭ-

38 ಕ್ತರಾಗಿಯುಂ ಸ್ಫುರಿತಹರಿಪ್ರತಾಪರಖಿಳದ್ವಿಜರಾಜಸಮಾಖ್ಯರಾಗಿಯುಮುರ್ಬ್ಬರೆಗೆ ಕಳಂಕದೋಷರಹಿತ-
ದ್ವಿಜರಾಜರು ಮಾಗೊಳಾಧಿಪನ್ನರಹ-

39 ರಿಪಾದಪಂಕರುಹಷಟ್ಪದರೀ ದ್ವಿಶತದ್ವಿಜೋತ್ತಮರು॥ ಆ ಇನ್ನೂರ್ವ್ವರ ಪ್ರಿಯಪುತ್ರ ಸಮೆಯದಗರುಡ
ಮರ್ಮ್ಮರಸನನ್ವಯ ॥ ಮಂದಾ-

40 ಕ್ರಾಂತ ॥ ಭಾರದ್ವಾಜಪ್ರವರಜನಿತಃ ಪದ್ಮನಾಭಸ್ಯ ಸೂನುರ್ಜಾನಕ್ಯಾಖ್ಯಾ[ಃ*] ಪ್ರಥಿತತನಯಃ ಪುಣ
ಪುಂಜಪ್ರಭಾವಃ । ಶ್ರೀಮದ್ಧಾತ್ರೀತಿಳಕವಿಳಸನ್ಮಾಗೊ-

41 ಳಗ್ರಾಮಶೋಭಾಪ್ರಖ್ಯಃ ಪ್ರಾಜ್ಞಃ ಪ್ರಕಟಿತಯಶಃ ಕಾಳಿಮಯ್ಯದ್ವಿಜೇಶಃ ॥ ವೃ ॥ ಆ ಪ್ರಭು ಕಾಳಿ-
ಮಯ್ಯನ ನಿಜಾಂಬಿಕೆ ದೇವಕಿದೇವಿಗಾತ್ಮಜರ್ವ್ವಿಪ್ರಕುಳೋ-

42 ದ್ಭವರ್ಜ್ಜನಿಸಿದ ವರಮೂರ್ತ್ತಿಗಳಲ್ಲಿ ಪದ್ಮನಾಭಪ್ಪ್ರಭನಗ್ರಜಂಗನುಜರಾ ಬಸವಯ್ಯನುದಾತ್ತಭಾಸ್ಕ-
ರಾಂತಕಪ್ಪ್ರಥಿತಪ್ರಕಾಶರೆನೆ ಮಾಗೊಳದೊಳ್ತೊಳೆದನ್ನರ್ತಂ-

43 ತರಂ ॥ ವಿಳಸ[ದ್ದು]ಗ್ಧಾಬ್ಧಿಯೊಳ್ಕೌಸ್ತುಭಮುಡುಪತಿಕಳ್ಪದ್ರುಮಂ ಸುಪ್ರತೀಕಂಗೆಲೆ ಪುಟ್ಟಿರ್ಪ್ಪನ್ತೆ
ಪದ್ಮೆಯ್ಯನ ವನಿತೆ ಮಹಾಪ್ರಖ್ಯೆ

44 ಚಂಡಾಂಬಿಕಾಖ್ಯೋಜ್ವಳಕುಕ್ಷಿಕ್ಷೀರವಾರಾಶಿಯೊಳತಿಮುದದಿಂ ಪುಟ್ಟಿದಪ್ಪುತ್ರರುದ್ಯದ್ಭಳಕಾಮಂ
ನಾರಸಿಂಹಂಗನುಜನೆಸೆವ ಸಂಕಣ್ಣನುದ್ದಾಮಮಮ್ಮರ್ಗಂ ॥

45 ಪಿರಿದಂ ಬ್ರಹ್ಮ(ಂ)ಧರಾಚಕ್ರದೊಳೆಸೆಯಲುಕೆ(ಂ)ನ್ದತ್ಥಿಗಯಿಂ ಮಾಡಿಸಿಟ್ಟ(ಂ)ನ್ತಿರಲುದ್ಯನ್ಮಾಗೊಳ-
ಗ್ರಾಮದ ಸಮೆಯದ ಮಮ್ಮರ್ಗಂಕನುದ್ಧತ್ತಿರ್ಕೂಟೋತ್ಕರದಿಂ ದೇವಾಲ್ಯಮಂ

46 ಮಾಡಿಸಿ ಗಿರೀಶನುಪೇಂದ್ರಾಹ್ವಯಾರ್ಕ್ಕಪ್ರತಿಷ್ಠೆ ಸ್ಥಿರಮಾಗಲ್ಮಾಡಿದಂ ದೇವಕಿಯ ಪತಿ ಮಹಾಖ್ಯಾತ
ಕಾಮಾನುಜಾತಂ ॥ ೫ ॥ ಆ ನಾಳ್ಪ್ರಭುವಿನ ಸು-

47 ತ ಭುವಿದಾನೋನ್ನತ ಚಾಂಡಿಯಕ್ಕನನುಜಂ ಪ್ರಿಯಸನ್ಮಾನಿ ಗುಣರತ್ನವಿಬ್ಧನಿಧಾನಾತ್ಮಜ ಸೋಮ-
ನಮಳಕೀರ್ತ್ತಿಲಲಾಮಂ ॥ ವೃತ್ತಂ ॥ ತರಣಿಗೆ ತೇಜೋವಿಭವಂ

48 ಮುರರಿಪುಗುದ್ಯತ್ಸುದರ್ಶನಂ ಪುಟ್ಟುವವೊಲು ಹರಿಭಕ್ತಮಮ್ಮರಾಜನ ವರಸುತನುದಿಯಿಸಿದ ಪದ್ಮ-
ನಾಭ ಮಹಾತ್ಮಂ ॥ ಸ್ವಸ್ತಿ ಶ್ರೀಮತು ಶಕವರ್ಷ ೧೧೩೧-

49 ನೆಯ ಶುಕ್ಲಸಂವತ್ಸರದ ಶ್ರಾವಣ ಶುದ್ಧ ಪೌರ್ಣ್ನಮಿ ಸೋಮವಾರ ಸೋಮಗ್ರಹಣ ಕರ್ಕ್ಕಾಟಕಸಂ-
ಕ್ರಮಣ ವ್ಯತೀಪಾತಮಿನ್ತೀ ಮಹಾತಿಥಿಯನ್ದು ಶ್ರೀಮತು ಸಮೆಯದಗರು-

50 ಡ ಮಮ್ಮರಸ ತ್ರೈಮೂರ್ತ್ತಿದೇವರ ಪ್ರತಿಷ್ಠೆಯಂ ಮಾಡಿ ಮಾಗೊಳದೂರಡೆಯಪ್ರಮುಖವಶೇಷ-
ಮಹಾಜನನಿರ್ವ್ವಾಣ ಸ್ವಾಮಿಗಳ ಶ್ರೀಪಾದಕ್ಕೆ ಸುವರ್ಣ್ನಪು-

51 ಷ್ಪಮನಿಕ್ಕಿ ನಮಸ್ಕಾರಂ ಮಾಡಲಾ ಮಹಾಜನಂಗಳುಂ । ಹಿರಿಯಮಾಣಿಕ್ಯಭಂಡಾರಿ ಸಿಂಗಯ್ಯನುಂ ।
ಶ್ರೀಸೋಮನಾಥದೇವರ್ಗ್ಗಂ । ಪ್ರಸನ್ನಕೇಶವದೇವರ್ಗ್ಗಂ ಸೂ-

52 ರ್ಯದೇವರ್ಗ್ಗಂ ಅಂಗಭೋಗರಂಗಭೋಗನೈವೇದ್ಯಾದಿಶ್ರೀಕಾರ್ಯ್ಯಕ್ಕಂ ಸರ್ಬ್ಬಾಬಾಧಪರಿಹಾರವಾಗಿ
ಕುಳವಂ ಕಡಿದು ಬಿಟ್ಟ ಭೂಮಿ । ರಾಮೇಶ್ವರದೇವರ ಹೂದೋಂಟದಿಂ ಮೂಡ

53 ಹಾದರಿಯ ಮಣಲು ಮತ್ತರೆರಡು ಮನ್ನೆಯಗೆಱೆಯ ಕೋಡಿಯಿಂ ತೆಂಕ ತೋಂಟಗಟ್ಟು ಮತ್ತರೊಂದು
ಆ ಕೆಱೆಯ ಕೆಳಗೆ ಗದ್ದೆ ಮತ್ತರೆರಡು ಆ ಕೆಱೆಯ ಕೆಳಗೆ ತೋಂಟ ಮ-

54 ತ್ತರೊಂದು ಮಣಲಕಟ್ಟೆಯಿಂ ಪಡುವ ಕರಿಯವಾಗಿ ಮತ್ತರು ಮೂಱು। ನಾಗರಕೆಱೆಯ ಕೆಳಗೆ ನರಸಿಂ-
ಹದೇವರ ದಾರಿಯಿಂ ಪಡುವ ಮತ್ತರೊಂದು । ಹಂದೆಯಗೆಂಗಾಡು

55 ಮತ್ತರು ಮೂಱು ಅಲ್ಲಿಂ ಪಡುವ ಕಗ್ಗಲ್ಲಿಂ ಬಡಗ ಕೆಂಗಾಡು ಮತ್ತರೇಳು । ಬಾದುಂಬೆಯ ಕಟ್ಟೆಯಿಂ
ಮೂಡ ಹಿರಿಯೋಣಿಯಿಂ ಬಡಗ ಕೆಂಗಾಡು ಮತ್ತರೆರಡು ।

56 ಅಲ್ಲಿಂ ಮೂಡ ಹಿರಿಯೋಣಿಯಿಂ ಬಡಗ ಬೆಳುಗಲ್ಲ ಕೆಂಗಾಡು ಮತ್ತರು ನಾಲ್ಕು । ಗಳಗೆವೃಣಸೆಯಿಂ
ಮೂಡ ಹಿರಿಯೋಣಿಯ ದಾರಿಯಿಂ ಬಡಗ

57 ಕೆಂಗಾಡು ಮತ್ತರು ನಾಲ್ಕು ಅಣಿಲಗೆಱೆಯೋಣಿಯಿಂ ಪಡುವ ನಾಗೆಯಗೆಂಗಾಡು ಮತ್ತರು ನಾಲ್ಕು
ಶ್ರೀ ಊರಡೆಯರ ಶ್ರೀಮಾನ್ಯದ ಭೂಮಿ ಹದಿನೆಂಟರ ಹಸೆ-

58 ಗೆಯಲ್ಲಿ ಹಿರಿಯಮೊದಲ ಅಣ್ಣಯ್ಯನಪ್ಪಯ್ಯನ ಭಾಗೆ ಮತ್ತರು ನಾಲ್ಕು ಕಂಭ ನಾಲ್ನುಱಯ್ವತ್ತು ।
ಆ ಮೊದಲ ಗುಂಡದೇವಪೆದ್ದಿಗಳ ಭಾಗೆ ಮ-

59 ತ್ತರು ನಾಲ್ಕು ಕಂಭ ನಾಲ್ನೂಱಯ್ವತ್ತು । ಮತ್ತವಾ ಮೊದಲ ಸೋಮೇಶ್ವರಭಟ್ಟರ ಭಾಗೆ ಮತ್ತರು
ನಾಲ್ಕು ಕಂಭ ನಾಲ್ನೂಱಯ್ವತ್ತು । ಆ ಹಸುಗೆಯಲ್ಲಿ ಕಿಱಿ-

60 ಯಮೊದಲ ಚಂದ್ರಮಂಚಿಯಣ್ಣಂಗಳ ಪೆದ್ದಯ್ಯನ ಭಾಗೆ ಮತ್ತರು ನಾಲ್ಕು । ಅನ್ತಾ ಸ್ಥಳ ಮತ್ತರು
ಹದಿನೇಳು ಕಂಭ ನಾಲ್ನೂಱಯ್ವತ್ತು । ಅಲ್ಲಿಂ ತೆಂಕಲು

61 ಇಪ್ಪತ್ತನಾಲ್ಕಱ ಹಸುಗೆಯಲ್ಲಿ ಹಿರಿಯಮೊದಲ ಗುಂಡದೇವಪೆದ್ದಿಗಳ ಭಾಗೆ ಮತ್ತರಾಱು ಹದಿನೆಂಟಱ
ಹಸುಗೆಯಲ್ಲಿ ಹಿರಿಯ-

62 ಮೊದಲ ಪಾಲಪೆದ್ದಿಗಳ ಸಾವಿದೇವಭಟ್ಟರ ಭಾಗೆ ಮತ್ತರು ನಾಲ್ಕು ಕಂಭ ನಾನೂಱಯ್ವತ್ತು [1]। ವಾಸು-
ದೇವಶಣಂಗಿಯರ

63 ಕೇಶಿಯಣ್ಣಂಗಳು ಕೊಟ್ಟ ಗದ್ದೆ ಮನ್ನೆಯಗೆಱೆಯ ಕೆಳಗೆ ಮತ್ತರೊಂದು । ಎಲವಸಗೆಱೆಯ ಕೆಳಗೆ
ತುಯ್ಯಲುಗೆಯಿ ಮತ್ತರು ನಾಲ್ಕು ಕಂಭ ನಾನೂಱಯ್ವತ್ತು ।

64 ಮಮ್ಮರಸರಳಿಯ ಗಂಡಗುಡಿಯ ಪದುಮಯ್ಯ ಬಿಟ್ಟ ಗೊತ್ತಿನ ಹುಣಿಸೆಯ ಕೆಂಗಾಡು ಕೆಯಿ ಮತ್ತರು
ನಾಲ್ಕು । ಗೋನತವರ ಕನ್ನೆಯಗೆಯಿ ಮತ್ತರು ಮೂಱು ॥

---

[1] Some space is left blank here.

65 ನಾಲ್ಕು ನಾಡುಗಳು ನೆರದೆಱುವತ್ತು ಹೇಱುವೆತ್ತಿಂಗೆ ಸರ್ಬ್ಬಾಬಾಧಪರಿಹಾರವಾಗಿ ತ್ರೈಮೂರ್ತಿ-
ದೇವರ್ಗ್ಗೆ ನಡವಂತಾಗಿ ಬಿಟ್ಟರು । ಈ ಧರ್ಮ್ಮಮನೂರಡೆಯ ಪ್ರಮುಖವಿನ್ನೂರ್ಬ್ಬ-

66 ರುಂ ಪ್ರತಿಪಾಳಿಸುವರು ॥ ದಾನಂ ವಾ ಪಾಲನಂ ವಾಪಿ ದಾನಾತ್ಶ್ರೇಯೋನುಪಾಲನಂ। ದಾನಾತ್ಸ್ವರ್ಗ್ಗ-
ಮವಾಪ್ನೋತಿ ಪಾಳನಾದಚ್ಯುತಂ ಪದಂ ॥ ಇನ್ತೀ ಧರ್ಮ್ಮಮನಾವನಾನುಮೊರ್ಬ್ಬಂ

67 ಪ್ರತಿಪಾಳಿಸಿದಾತಂ ಗಂಗೆ ವಾರಣಾಸಿ ಗಯೆಯರ್ಘ್ಯತೀರ್ಥ ಕುರುಕ್ಷೇತ್ರಮೆಂಬ ನಿಖಿಳಮಹಾತೀರ್ತ್ಥ-
ಗಳೊಳು ಸಾಯಿರ ಕವಿಲೆಯ ಕೋಡುಂ ಕೊಳಗುಮಂ ಸುವರ್ಣ್ಣ-

68 ದಿಂ ಪಂಚರತ್ನದಿಂ ಕಟ್ಟಿಸಿ ಚತುರ್ವ್ವೇದಪಾರಗರಪ್ಪ ಸಾಸಿರ್ಬ್ಬ ಬ್ರಾಹ್ಮಣರಿಗುಭಯಮುಖಿಯಂ
ಕೊಟ್ಟ ಫಲಮಕ್ಕು । ಈ ಧರ್ಮ್ಮಮನಾವನಾನುಮೊರ್ಬ್ಬನಳಿದಾತನಾ ತೀರ್ಥ-

69 ದಲಾ ಕವಿಲೆಗಳನಾ ಬ್ರಾಹ್ಮಣರುಮಂ ಸ್ವಹಸ್ತದಿಂ ಕೊನ್ದ ಪಂಚಮಹಾಪಾತಕನಕ್ಕು ॥ ಸ್ವದತ್ತಂ ಪ-
ರದತ್ತಂ ವಾ ಯೋ ಹರೇತಿ ವಸುಂಧರಾ[ಂ*] ಷಷ್ಠಿರ್ವ್ವರ್ಷ-

70 ಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿ[ಃ*] ॥ ಸಾಮಾನ್ಯೋಯಂ ಧರ್ಮ್ಮಸೇತುಂ ನೃಪಾಣಾಂ
ಕಾಲೇ ಕಾಲೇ ಪಾಲನೀಯೋ ಭವದ್ಭಿಃ । ಸರ್ಬ್ಬಾನೇತಾನ್ ಭಾವಿನಃ

71 ಪಾರ್ತ್ಥಿವೇಂದ್ರಾನ್ಭೂಯೋ ಭೂಯೋ ಯಾಚತೇ ರಾಮಚಂದ್ರಃ ॥ ತ್ರೈಮೂರ್ತಿದೇವರ್ಗ್ಗೂರಡೆಯರ
ಮಾನೆಣ್ಣೆಯೊತ್ತ ಹೊಳಲಿಸಟ್ಟಿಯ ಕೇತನ ಗಾ-

72 ಣಕ್ಕೆ ಗದ್ಯಾ[ಣ*]ಮೂಱು । ಗೊನೆಯ ಸೋಮನ ಗಾಣಕ್ಕೆ ಗದ್ಯಾಣಂ ಮೂಱು । ನೊಣಬರ ಚೌಡ-
ಯನ ಗಾಣಕ್ಕೆ ಗದ್ಯಾಣಂ ನಾಲ್ಕು ಅನ್ತು ಗ ೧೦ ನಂವಾದೀವಿಗೆಗೆ ।

73 ದೇವಿಂಗೆಱೆಯ ಕೆಳಗೆ ಮಮ್ಮನಣ್ಣಂಗಳ ಮಕ್ಕಳು ಕಾಮಯ್ಯನ ಮಗ ಬಾಚಯ್ಯಂ ಬಿಟ್ಟ ಮತ್ತ-
ರೆರಡು ನಾಭಯ್ಯನ ಮಗ ಪದ್ಮನಾಭ ಬಿಟ್ಟ ಮತ್ತರೆರಡು

74 ಬಾಚಯನಾಯಕನ ಮಗ ದುಗ್ಗಯ್ಯ ಬಮ್ಮಯ್ಯ ಬಿಟ್ಟ ದೇವರ ದಾರಿಯಿಂ ಮೂಡ ಗದ್ದೆ ಮತ್ತ-
ರೊಂದು ॥

75 ಮತ್ತ ದೇವಿಗೆಱೆಯ ಕೆಳಗೆ ಮಹಾಜನಂಗಳು ಬಿಟ್ಟ ಮತ್ತರು ಮೂಱು ।

## No. 330.

(*A.R. No.* 495 *of* 1914.)

ON A SLAB SET UP IN FRONT OF THE BHIMESVARA AND DEMESVARA TEMPLE AT HIREHADAGALLI, SAME TALUK AND DISTRICT.

This is dated **Śaka 1133, Prjāpati, Māgha, śu. 3, Ādityavāra** corresponding to **A.D. 1212 January 8 Sunday,** in the reign of the Hoysaḷa king **Vishṇuvardhana-Vīra-Ballāḷa (II)**, who was ruling over **Banavāsi twelve-thousand, Noḷambavāḍi thirtytwo-thousand, Huligere three-hundred**, the two **Beḷuvolas** and **Māsavāḍi** right up to **Heddoṟe,** from his *nelevidu* **Haḷḷavura** surnamed **Vijayasamudra.** His senior queen **Padumaladēvī** was ruling over **Hosahaḍaṅgile.** It records the gift of some plots of land made at the instance of the 120 *Mahājanas* of the place for the two tanks, *viz.,* Hiriyakeṟe and Tumbinakeṟe by the Brāhman general, **Gaṅgimayya-Nāyaka Dāvaṇṇa-Daṇḍanāyaka.** The genealogy of the *Daṇḍanāyaka* is given and the Brāhman *Mahājanas* of Hosahaḍaṅgile are described as *ripunāyaka-santrāsigaḷu.* The record has poetical merits but is unfortunately damaged.

1 ಸ್ವಸ್ತಿ ಶ್ರೀರ್ಜಯಶ್ಚಾಭ್ಯುದಯಶ್ಚ ॥ ಜಯತ್ಯಾವಿಷ್ಕೃತಂ ವಿಷ್ಣೋರ್ವ್ವಾರಾಹಂ ಕ್ಷೋಭಿತಾರ್ಣ್ಣ-
2 [ವಂ] । ದಕ್ಷಿಣೋನ್ನತದಂಷ್ಟ್ರಾಗ್ರವಿಶ್ರಾಂತಭುವನಂ ವಪುಃ ॥ ನೂತ್ನ ಪಡಂಗಿಲೆಗ್ರಾಮೇ
3 . ಮಶೀತ್ಯುತ್ತರಂ ಶತಂ। ವಿಪ್ರೋತ್ತಮಾನಾಮಭ್ಯಗ್ರಂ ಸ್ಥೇಯಾದಾಚಂದ್ರತಾರಕಂ ॥
4 ॥ ವೃತ್ತ ॥ ದಳಿತಸರೋಜಿನೀಮುಖಮದಾಳಿಚಯಂ ಬಹುರಾಳರಾಜಿತೋತ್ಪಳನಯನದ್ವಯಂ ರುಚಿರ-
ಮೂರ್ಮ್ಮಿಕ-

5 . . ಮಂ ಮನೋಹರೋಜ್ವಳಮೊಪ್ಪ . ಜಳದೆ ಪೆರಪೂರ್ಣ್ಣತೆ ಏಕಲಕ್ಷ್ಮಿ ನಿಕ್ಕಳದಿನಭೀಷ್ಟಮಂ ಕುಡುಗೆ
6 . . ಚನೂಪರಿಗಂ ನಿರಂತರಂ ॥ ಸ್ವಸ್ತಿ ಸಮಸ್ತಭುವನಾಶ್ರಯಂ ಶ್ರೀಪೃಥ್ವೀವಲ್ಲಭ ಮಹಾರಾಜಾ-
7 ಧಿರಾಜ ಪರಮೇಶ್ವರ ಶ್ರೀದ್ವಾರಾವತಿಪುರವರಾಧೀಶ್ವರ ಯಾದವಕುಳಾಂಬರದ್ಯುಮಣಿ ಸ(ಂ)ಮ್ಯಕ್ತ- ಚೂಡಾಮಣಿ
8 ಮಲೆರಾಜರಾಜ ಮಲೆಪರೊಳ್ಗಂಡ ಕದನಪ್ರಚಂಡನೇಕಾಂಗವೀರನಸಹಾಯಶೌರ್ಯ್ಯ । ಶನಿವಾರಸಿದ್ಧಿ । ಗಿರಿದು-
9 ರ್ಗ್ಗಮಲ್ಲ ಚಲದಂಕರಾಮ । ನಿಶ್ಶಂಕಪ್ರತಾಪಚಕ್ರವರ್ತ್ತಿ ಹೊಯ್ಸಳ ವಿಷ್ಣುವರ್ದ್ಧನವೀರಬಲ್ಲಾಳು- ದೇವನ ರಾಜಾ-
10 ನ್ವಯಮೆನ್ತೆಂದಡೆ ॥ಕಂ॥ ವಿಳಸದ್ವಿಶಿಷ್ಟಹೃದ್ಭ್ಯಕುಳದ ತಮಂ ಪರೆಯೆ ಹೊಯ್ಸಳಾನ್ವಯಭೂ- ಭೃತ್ತುಳದಿಂ-
11 ದ ಪೊಗೆದು ನಿಜಭುಜಬಲದೆ ಜಗಚ್ಚಕ್ಷುವೆನಿಪ ವಿನಯಾದಿತ್ಯಂ ॥ ತತ್ಪುತ್ರಃ । ಎಱೆಯಂಗನೃಪಃ । ತಸ್ಯಾಗ್ರಮಹಿ-
12 ಷೀ ನಿಖಿಳಸೌಭಾಗ್ಯನಿಳಯಾ । ಏಚಣದೇವೀ ॥ ತಯೋಃ ಪುತ್ರಾ ಉದಯಾದಿತ್ಯಬಲ್ಲಾಳವಿಷ್ಣು- ವರ್ದ್ಧನನಾಮಾನಃ ತೇ-
13 ಷಾಂ ಮಧ್ಯೇ ನಿಖಿಳರಾಜ್ಯವಿಭವಸ್ಯ ವಿಷ್ಣುವರ್ಧನನಾಮಮಹಾರಾಜಸ್ಯ ಮಹಾಲಕ್ಷ್ಮೀ[ಪತೇಃ।] ತತ್ತನೂಜೋ ನರಸಿಂ-
14 ಹದೇವಮಹಾನೃಪಃ ಆಸೀತ್ ತದಗ್ರಮಹಿಷೀ ಶ್ರೀಮದೇಚಲದೇವೀತಿ ವಿಖ್ಯಾತಾ । . . ತಸ್ತಸ್ಯಾ ಮಾವಿರಾಸೀತ್
15 ವೀರಬಲ್ಲಾಳಪೃಥಿವೀಪತಿಃ ॥ ಆತನ ಪರಾಕ್ರಮವೆಂತೆಂದಡೆ ॥ ವೃತ್ತ॥ ಲಾಳಬ್ಯಾಳಗರುತ್ಮ ಗೂರ್ಜ್ಜ- ರಕುಭೃ-
16 ದ್ದಂಭೋಳಿವಿದ್ವೇಷಿ ಪಾಂಚಾಳಶ್ರೀಲಲನಾಪಹಂ ಮಗಧಮಾದ್ಯತ್ಕಾಲದಂಡಾಂಕಂ ಚೋಳಚಾಳನಂ ಪಾಂಡ್ಯಗಂಡ ಮದ-
17 [ಕೋದಂಡೋ] ಗ್ರಪಂಚಾಸ್ಯ ಚ . . . ರೋಚ್ಛ್ರಿಯೊಳ್ಗಲ್ವರಾರ್ವಿದ್ವಿಷ್ಟಭೂಪಾಲಕರ್ ॥ . . ವೀರಬಲ್ಲಾಳನ ಪಟ್ಟದ-
18 ರಸಿ ಪದುಮಲದೇವಿಯರ ಮಹಿಮೋನ್ನತಿಯೆಂತೆಂದಡೆ ॥ ಸ್ವಸ್ತ್ಯನವರತಪರಮಕಲ್ಯಾಣಾಭ್ಯುದಯ ಸ-
19 ಹಸ್ರಫಳಭೋಗಭಾಗಿನೀ ದ್ವಿತೀಯಲಕ್ಷ್ಮೀಸಮಾನೆ । ಕಳಹಂಸಯಾನೆ ಸಮಸ್ತಾವನಿಪಾಂತಃಪುರ-
20 ವಿಶದವಿರಾಜಮಾನರೂಪವಿದ್ಯಾಧರಿ । ವ್ರತೋನ್ನತಪಯೋಧರಿ । ಪರಿರಕ್ಷಿತಾತ್ಮೀಯಬಂಧುವರ್ಗ್ಗೆ ।
21 ಮನುನೀತಿಮಾರ್ಗ್ಗೆ । ಪ್ರತ್ಯೇಕಪ್ರಭಾವಸರಸ್ವತಿ । ದಶದಿಶಾಂತರಾ . . . . ನಿರ್ಮ್ಮಳಯಶ(ಃ) ಸ್ವತೀ ।
22 ನಿರನ್ತರಪ್ರವರ್ದ್ಧಮಾನವೀರಬಲ್ಲಾಳದೇವರಾಜ್ಯಲಕ್ಷ್ಮೀನಿವಾಸೆ ಶುಭಲಕ್ಷ . . . . . ರೆಪ್ಪ ಪಿರಿಯರಸಿ ಪದ್ಮಲ-
23 ಪಟ್ಟಮಹಾದೇವಿಯರು ಪೊಸವಡಂಗಿಲೆಯಂ ಸುಧರ್ಮ್ಮದಿಂ ರಕ್ಷಿಸುತ್ತಮಿರೆ ॥ . ಸ್ವಸ್ತಿ ಯಮನಿಯ- ಮಸ್ವಾ-
24 ಧ್ಯಾಯಧ್ಯಾನಧಾರಣಮೋನಾನುಷ್ಠಾನಪಾರಾಯಣಜಪಸಮಾಧಿಶೀಲಗುಣಸಂಪನ್ನರುಂ ದ್ವಿಜಪ್ರಸ(ಂ)- ನ್ನರುಂ ಶ್ರೀಮ-
25 ದನವರತಬುಧನಿಕರರುಚಿರವದನಸರಸೀರುಹಭರವಿಕಸಿತ[ಸಿತ]ಕರಕಿರಣಸದೃಶತೇಜೋಮಯ-
26 ವಿಭಾಸಿಗಳು ರಿಪುನಿಕಾಯಸಂತ್ರಾಸಿಗಳು ಶ್ರೀಮದಖಿಳದಿವಿಜಮೌಳಿಮಂಡನಮಣಿಪ್ರಭಾವಿಕಸಿತ-
27 ಪಾದಾರವಿಂದದ್ವಂದ್ವನೌಂದರಾಯಮಾನಶ್ರೀಮದ್ಭೀಮನಾಥಚರಣಕಮಳಯುಗಳವಿಲೋಲಭೃಂಗರುಂ ।
28 ಸಾಹಸೋತ್ತುಂಗರುಂ। ಶ್ರೀಮದ್ವಸುಧಾಂಗನಾರುಚಿರಚಿಹುರಾಯಮಾನಕು(ಂ)ನ್ತಳದೇಶಮಧ್ಯವರ್ತ್ತಿ- ನೊ-
29 ಣಂಬವಾಡಿ ದ್ವಾತ್ರಿಂಶತ್ಸಹಸ್ರಾಖ್ಯ ನಿಖಿಳಗ್ರಾಮಾದಿಮುಖ್ಯ । ಶ್ರೀಮಜ್ಜನಮೇಜಯಕ್ಷತ್ರಿಯೋತ್ತಮ-
30 ದತ್ತ । ಯಶೋವತಿ । ಶ್ರೀಮತ್ಸರ್ಬ್ಬನಮಸ್ಯದಗ್ರಹಾರಂ ಪೊಸವಡಂಗಿಲೆಯ ಮಹಾಜನಂಗಳ ಸಮಾಖ್ಯೆ- ಯೆಂತೆಂದಡೆ ॥

31 ವ್ರಿತ್ತ ॥ ಚಾತುರ್ವ್ವೇದಚತುಮ್ಮುಖಸ್ಸಕಲಶಾಸ್ತ್ರಪ್ರೌಢವಾಣೀಸಮಸ್ತಾಗಮತಂತ್ರಸ್ಸರ್ವ್ವರಾದಾ-
ಯಕಪ್ರಕಟಿತಪ್ರಖ್ಯಾತ-

32 ಕೀರ್ತ್ತಿರ್ಧ್ವಜಭೂರ್ತಬ್ರಾತಸುರಕ್ಷಣಾನ್ವಿತಲಸದ್ವೃಕ್ಷಪ್ರಭರ್ಮರ್ತ್ಯಮಾಂಧಾತಸೌಖ್ಯಪುರಂದರರ್ಧ-
ರೆಯೊಳೀ ನೂಱೆಪ್ಪತಿ-

33 ಬ್ಬರ್ದ್ವಿಜರು ॥ ಕಂದ ॥ ಸುರುಚಿರವನರಾಜಿಗಳಿಂ ವರಪೂರ್ಣತಟಾಕದಂದವೊಪ್ಪುವುದನ್ತಪ್ಪುರಮ-
ಗ್ರಹಾ-

34 ರ ಲಕ್ಷ್ಮೀಕರಮೆನಿಪುದು 'ರಸೆಗೆ ಪೊಸಪಡಂಗಿಲೆ ಚೆಲ್ವಂ ॥@ ಸ್ವಸ್ತಿಯನವರತವಿನಮದಶೇಷಕ್ಷೋಣೀ-
ಶಮೌ-

35 ಳಿಕೀಲಿತಮಾಣಿಕ್ಯಮರೀಚಿಮಂಜರೀಪುಂಜರಂಜಿತಪದದ್ವಂದ್ವರುಂ । ನಿರವದ್ಯಾಖಿಳದೋಷದೂಷಿತದ್ವಂ-
ದ್ವರುಂ। ಶಾರದ-

36 ನೀರದಪಾರದತಾರಾಚಳಕರ್ಪೂರಪೂರಕ್ಷೀರವಾರಾಶಿಶರಚ್ಚಂದ್ರಚಂದ್ರಕಾಸ್ಫಟಿಕಮಳಯಜಸ್ಮೇರನೀ-
ಹಾ-

37 ರತಾರಾಹಾರಗೋಕ್ಷೀರಶಂಖಸಂಕರಾಂಗವಿಶದಯಶಸ್ಸುಧಾಧವಳಿತದಶದಿಶಾವಳಿಯರುಂ । ಬಿದುಕಾ-

38 ಮಿನೀಕಮನೀಯನಿಳಯರುಂ । ದಾರುಣದಾರಿದ್ರ್ಯದಾವಪಾವಕಕೋಪಹತವಿವಿಧಜನವ್ರಿಂದವಂದಿತ
ವಂದಿವ್ರಿಂದಾನಂ-

39 ದಕನಕವರ್ಷಕಾಳಮೇಘರುಂ। ದುರಿತದೂರೀಕ್ರಿತೌಘರುಂ। ಪರವಾದಿಗರ್ಬ್ಬಪರ್ಬ್ಬತಪಕ್ಷಚ್ಛೇದನ-
ಪಟುತರಪವಿ-

40 ದಂಡಪ್ರಖ್ಯಾತಯುಕ್ತಿಯುಕ್ತರುಂ। ಶ್ರುತಿಶಿರಸ್ಸಮುದಿತನಿರವದ್ಯಹೃದ್ಯವಿದ್ಯಾನಾಯಕರುಂ ಶ್ರೀಮ-
ದಮರ-

41 ನಂದಯೋಗೀಂದ್ರಪಾದಾರವಿಂದದ್ವಂದ್ವವಂದನಾನಂದಿತಮಾನಸರುಂ ವಿದ್ವಜ್ಜನಮನಸ್ಸರೋಜನೀರಾ-
ಜಿತರಾಜಹಂಸರುಂ ಶ್ರೀಮಜ್ಜಗ-

42 ದಾರಾಧ್ಯರಪ್ಪ ಶ್ರೀಮದನುಪಮಸುಖರೂಪಸ್ವಾಮಿಗಳ ದಿವ್ಯಶ್ರೀಪಾದಪದ್ಮಾರಾಧಕರುಮಪ್ಪ ಶ್ರೀಮನ್ಮ-

43 ಹಾಪ್ರಧಾನಂ ದಾಪಣ್ಣಂಗಳನ್ವಯಂ ॥ ವ್ರಿ ॥ ಸುಕವಿಕದಂಬಕಲ್ಪಕುಜವಾಶ್ರಿತಯೂಥರಸಾಬ್ಧಿಪೂರ
ಸಾತ್ವಿಕಜನವಿನ್ನು-

44 ವರ್ಗ್ಗನಿಧಿ ಗೌತಮಗೋತ್ರದ ಕಾಮಧೇನು ವಾಜಿಕುಳದಿನೇಶನೇಚಲೆಮಹಾತ್ಮೆಯ ವಲ್ಲಭೆ ಗಂಗಿಮ-
ಯ್ಯನಾ-

45 ಯಕವಿಭುವಿಂದಮಿೂ ಪೊಸಪಡಂಗಿಲೆಯೊಪ್ಪುವುದೀ ಧರಿತ್ರಿಯೊಳು॥ ಆ ಗಂಗಾಧರನಾಯಕಾಹ್ವಯ-

46 ನ ವಾಮೆ ಶ್ರೀಮದೇಚೌವ್ವೆಗಂಗಾಗರ್ಭಿತತನೂಜನಿದ್ಧರವಿತೇಜಂ ಸತ್ಯರಾಜಂ ಯಶೋದ್ಯೋಗಂ
ಶ್ರೀಮಹದೇವನಾಯಕ-

47 ನ ನಾರಿ ಪ್ರಖ್ಯೆ ನಾಗೌವ್ವೆಗಂ ಶ್ರೀಗಂಗಾಧರದೇವನುದ್ಭವಿಸಿದಂ ಶಿಷ್ಟೇಷ್ಟಕಲ್ಪದ್ರುಮಂ ॥ ಧರೆಗೆಲ್ಲ
ಸ್ವರ್ಣ್ನಧಾರಾವರ್ಷ ಮು-

48 ದದೆ ಬಂದಂತೆ ಗೋತ್ರಬ್ರಜಕೊಪ್ಪಿರೆ ಶಿಷ್ಟೇಷ್ಟಾಳಿಗೆಲ್ಲಂ ಸುರತರು ಫಲವಾದಂತೆ ಗಂಭೀರ ಗಂಗಾಧರ-
ದೇವಪ್ರ-

49 ಖ್ಯನುದ್ಯ[ತ್ಸತಿ]ಗುಣವಿಳಸಚೌಡಿಯಕ್ಕಂಗೆ ಲಕ್ಷ್ಮೀಕರಜಾತದ್ವಾರಮದಂಡಾಧಿಪ ಹರಿಹರಮಾದ-
ಯ್ಯನೆಂಬ ತ-

50 ನೂಜರು ॥ ಅವರಿಂದಗ್ರಜನತ್ಯುದಾತ್ತಮಹಿಮಂ ಶ್ರೀವಾಮದಂಡಾಧಿಪಂಗೆ ವಧು ಪ್ರಖ್ಯೆ ಪತಿಬ್ರತಾಚರಿ-

51 ತ ಭಾಸ್ವದ್ದೇವಕೀದೇವಿ। ಭಾಗ್ಯವತಿ ಸ್ತುತ್ಯೆ ಮಹಾತ್ಮನವಲ್ಲಭೆ ಲಸತ್ಸಾವಿತ್ರಿದೇವಿ ಪ್ರಸ(ಂ)ನ್ನವರಶ್ರೀ-

52 ಲಲನಾಸಮಾನಮೆನೆ ತಾಂ ಧನ್ಯಂ ಧರಾಚಕ್ರದೊಳು ॥ ಕ । ಮನುಚರಿತನಖಿಳಗುಣಸಜ್ಜನವಿನತಂ ಮಂ-
ತ್ರಿದಾವಣಂ

53 ಜಗದಾರಾಧ್ಯನುಪಮಸುಖರೂಪಪ್ರಭುವಿನಾಚರಣಸರೋಜಭೃಂಗ ಮನುಜೋತ್ತುಂಗ ॥ ಆ ಮಂತ್ರಿ
ಮುಖ್ಯ-

54 [ನ]ನುಜಂ ಸಾಮಜಬಳಯುತನಮಾತ್ಯ ಹರಿಹರನ ಮಹಾಪ್ರಮದಸತಿ ಲಕ್ಷ್ಮೀಗುಣಸ್ತೋಮೆಯೆನಲ್ವ-
ನಿತೆ-

55 ಯಸ್ಸೆರ್ಮಾನಮೆ ಧರೆಯೊಳು|| ಆತನನುಜಾತನವನೀಖ್ಯಾತಂ ಮಾಧವನ ವಧು ಪತಿಬ್ರತೆಗುಣದೊಳ್ಸೀತೆಗ-
56 ರುಂಧತಿಗಂಬುಜ[ಜಾತ]ಗೆ ದೊರೆ ಗೌರಿಯನ್ನಕ್ಕನವನೀತಳದೊಳು || ಸ್ವಸ್ತಿ ಶ್ರೀಮತು ಶಕವರ್ಷದ ೧೧೩೩ ನೆಯ ಪ್ರ-
57 ಜಾಪತಿಸಂವತ್ಸರದ ಮಾಘ ಶುದ್ಧ ತದಿಗೆ ಆದಿತ್ಯವಾರದಂದು ಶ್ರೀಮನ್ಮಹಾಮಂಡಳೇಶ್ವರಂ ಹೊಯ್ಸಣ ವಿಷ್ಣುವರ್ಧನವೀರಬ-
58 ಲ್ಲಾಳದೇವನು ನೊಣಂಬವಾಗಿ ಮೂವತ್ತಿಚ್ಛಾಯಿರ ಬನವಸೆ ಪನ್ನಿಚ್ಛಾಯಿರ ಹುಲಿಗೆಱೆ ಮೂನೂಱು ಬೆಳುವಲವೆರಡು ಮಾಸವಾ-
59 ಡಿ ಹದಿನ್ದೊಡೆ ಪರ್ಯ್ಯಂತಂಬರವಾಳುತ್ತ ವಿಜಯಸಮುದ್ರವೆನಿಪ ಹಳ್ಳವುರನೆಲೆವೀಡಿನಲಿದ್ರ್ದು ದುಷ್ಟ-ನಿಗ್ರಹಶಿಷ್ಟಪ್ರತಿಪಾಳನಂ ಮಾ-
60 ಡಿ ಸುಖದಿ ರಾಜ್ಯಂಗೆಯ್ಯುತ್ತಿರಲಾತನ ಪಟ್ಟದರಸಿ ಪದುಮಲದೇವಿಯರು ಹೊಸಹಡಂಗಿಲೆಯನಾಳು-ತ್ತವಿರಲ್ ಅವರ ಮಾವ ನ .
61 ಪರಸೆರಧಿಕಾರವಾಗಲವರು ಮುಖ್ಯವಾಗಲಶೇಷಮಹಾಜನ ನೂಱಿಪ್ಪತಿಂಬಸ್ವಾಮಿಗಳ ದಿವ್ಯಶ್ರೀಪಾದ-ಪದ್ಮಂಗಳಿಗೆ ಮಹಾಪ್ರಧಾ-
62 ನಂ ಗಂಗಿಮಯ್ಯನಾಯಕದಾವಣ್ಣಂಗಳು ನಮಸ್ಕಾರಮುಂ ಮಾಡಿ ಧರ್ಮ್ಮಪ್ರಸಂಗಮಂ ಬಿನ್ನಪಂ ಗೆಯ್ಯಲವರು ಹಿರಿಯಕೆಱೆಗೆ ತುಂಬಿನಕೆಱೆಗಂ
63 ಪಡಿಸಲಿಸುವನ್ನಾಗಿ ಧರ್ಮ್ಮವ ನೀಂ ಮಾಡವೇಳ್ಕೆಂದು ಬೆಸಸಲ್ಮಹಾಪ್ರಸಾದವೆಂದು ಕೈಕೊಂಡೂರಡೆಯರ ಶ್ರೀಮಾನ್ಯದ ಭೂಮಿಯ ಕ್ರ-
64 ಯಮಂ [ಕೊಟ್ಟು] ಭೂಮಿಯುಂ ಕಾಲ್ಗಚ್ಚಿ ಧಾರೆಯುಂ ಕೊಂಡಾ ಮಹಾಜನಂಗಳ ಸಂನಿಧಿಯ-ಲು ದಾವಣ್ಣಂಗಳೆರಡುಂ ಕೆಱೆಗೆ ಬಿಟ್ಟ ಧರ್ಮ್ಮ
65 ಊರಡೆಯ . . ಶ್ರೀಮಾನ್ಯದ ಎರೆ ಮತ್ತರು ೪೫ ಕ್ಕಂ ಸೀಮೆ | ಪಡುವ ಕೊಳಚೆಯೋಣಿ ಬಡಗ ಮಾರ್ತಿಮೆಗೆಯಿ
66 ಮೂಡ | ದೇವನಾಥದೇವರ ಕೆಯಿ | ತೆಂಕಣಮೇರೆ ದಬ್ಬಣಿಗಗೆಯಿ ತೋಟಗಟ್ಟ ಮತ್ತ ೨ ಕ್ಕಂ ಸೀಮೆ. ಪಡುವ ಈಚಿ[ಮೆ]-
67 ದೋಟದ ವ್ರೋಣಿ ಬಡಗಣಮೇರೆ ಆ ವ್ರೋಣಿ | ಮೂಡಣಮೇ . ಊರಡೆಗೊಳ | ತೆಂಕಮೇರೆ ಮದ್ದ-ಯಾವಾಳಾಂಡ | ಕೆಂಗಾಡ ಹೊಲದೆಸೀಮೆ |
68 ಪಡುವ ಚಿಕ್ಕಬಿಳಲು | ಬಡಗಮೇರೆ ಬಳ್ಳರೆಯ ಹೊಲ ಮೂಡಲು ಹಗಲಹರಸೀಮೆ | ತೆಂಕಣಮೇರೆ ಬೇವಿನಕೆಱೆಯ ಬಡಗ-
69 ಣಕೋಡಿ || ಊರಡಗೇರಿಯ ಬಡಗವಾಗಿಲ ಮನೆಯೊಂದು || ಇನ್ತಿನಿತು ಧರ್ಮ್ಮಮಂ ಮಹಾಜನ ನೂ-ಱಿಪ್ಪತಿಂಬರು
70 ಪ್ರತಿಪಾಳಿಸುವರು|| ಸ್ವದತ್ತಂ ಪರದತ್ತಂ ವಾ ಯೋ ಹರೇತು ವಸುಂಧರಾಂ ಷಷ್ಠಿರ್ವ್ವರ್ಷಸಹಸ್ರಾಣಾಂ ವಿಷ್ಠಾಯಾಂ ಜಾಯತೇ ಕ್ರಿಮಿಃ ||

## No. 331.

(*A.R. No.* 90-*A of* 1904.)

ON THE SIXTH SLAB SET UP ON THE SOUTH SIDE OF THE KALLESVARA TEMPLE AT BAGALI, HARAPANAHALLI TALUK, SAME DISTRICT.

This is dated **Aṅgirasa, Mārgaśira,. ba 8, Sōmavāra,** corresponding to **A.D. 1212 December 17, Monday.** The *Mahāmaṇḍalēsvara Vīrajagadāla* **Bammidēvarasa,** son of **Hariharadēva** and grandson of **Nāchidēva** of **Koṭṭūru,** is said to have made a gift of **a** large tract of land for the service of the god Kalidēvasvāmi. The gift was made in the presence of his teacher **Sōmayājya-Hiriyaṇṇa** of **Arasiyabīḍu.**

1 [1] ಜಯತ್ಯೇಷ ಮ-
2 ಹಾದೇವೋ ವಿಶ್ವರಕ್ಷಾವಿಚಕ್ಷಣಃ ಯಸ್ಸಪ್ತಮುನಿಮೋದಾತ್ಮಮಾವಿರ್ಭೂತಃ ಕಲಾನಿಧಿಃ ||
3 ಸ್ವಸ್ತಿ ಶ್ರೀಮತು ಅಂಗೀರಸಸಂವತ್ಸರದ ಮಾರ್ಗ್ಗಶಿರ ಬಹುಳದಷ್ಟಮಿ ೮ ಸೋಮವಾರದಂ-
4 ದು ಮಹಾಮಂಡಳೇಶ್ವರಂ ಕೊಟ್ಟೂರ ನಾಚಿದೇವನ ಮಂಮ ಹರಿಹರದೇವನ ಪುತ್ರನುಂ ಶ್ರೀಮ-
5 ನ್ಮ[ಹಾ*]ಮಂಡಳೇಶ್ವರಂ ವಿಪ್ರಪ್ರಸಾದ ವೀರಜಗದಾಳ ಬಂಮಿದೇವರಸರು ಸುಖಸಂಕಥಾವಿನೋ-

[1] This is written in continuation of No. 319.

6 ದದಿಂ ರಾಜ್ಯಂಗೆಯ್ಯುತಿರ್ದ್ದು ತಮ್ಮಾರಾಧ್ಯರರಸಿಯಬೀಡಿನ ಸೋಮಯಾಜ್ಯ ಹಿರಿ-
7 ಯಣ್ಣಂಗಳ ಸಂನಿಧಿಯಲು ಶ್ರೀಮತು ಹರಿಶ್ಚಂದ್ರದತ್ತಿಯಮಹಾಗ್ರಹಾ-
8 ರಂ ಬಾಳ್ಗುಳಿಯ ಶ್ರೀಸ್ವಯಂಭುಕಲಿದೇವರ ಅಂಗಭೋಗರಂಗಭೋಗಕ್ಕಂ ಅಲ್ಲಿಯ
9 ಮಹಾಜನಕ್ಕಂ ನಂದಿಯಬೇಹೂರ ಮೇಲಾಳಿಕೆ ಮಂನೆಯಸಹಿತ ಆ ವೂರ
10 ಚತುರಾಘಾಟ ಸೀಮೆಯಿಂದೊಳಗೆ ಸಮಸ್ತಭೂಮಿಯನಿತುವಂ ಸರ್ಬ್ಬಬಾಧೆಪರಿಹಾ-
11 ರವಾಗಿ ಧಾರಾಪೂರ್ಬ್ಬಕಂ ಮಾಡಿ ಬಿಟ್ಟ ಧರ್ಮ್ಮ ||

## No. 332.

(*A.R. No.* 269 *of* 1918.)

ON A SLAB SET UP IN THE KUMARASVAMI TEMPLE AT MUTTIGI,
SAME TALUK AND DISTRICT.

This is dated **Śaka 1136, Bhāva, Vaiśākha, śu. 1, Sōmavāra.** In Bhāva, Vaiśākha śu. 1 corresponded to A.D. 1214 April 12 Saturday (not Monday). In the previous year, however, it began on **Monday = 22nd April 1213** at **.44.** The record belongs to the reign of the Hoysaḷa king **Vīra-Ballāḷadēva (II).** It registers a gift of land for the maintenance of a water-shed at **Muttage,** the chief place of **Muttage thirty,** a sub-division of **Kōgaḷi five-hundred,** by the Brāhman **Hariyaṇṇa** or **Harihara,** son of **Vishṇu-Nāyaka,** the *Ūroḍeya* of **Ammeḷe** and the *Heggaḍe* of Raṅgayya, after receiving it from **Boppaya-Bammaya,** the *Prabhu* of the village.

1 ಓಂ[||*]ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ ತ್ರೈಳೋಕ್ಯನಗ-
2 ರಾರಂಭಮೂಲಸ್ತಂಭಾಯ ಶಂಭವೇ || ಸ್ವಸ್ತಿ ಶ್ರೀಜಯಶ್ಚಾಭ್ಯು-
3 [ದ]ಯಶ್ಚ || ಸಕವರ್ಷ ೧೧೩೬ ನೆಯ ಭಾವಸಂವತ್ಸರದ ವೈಶಾಖ ಸುದ್ಧ-
4 ೧ ಸೋಮವಾರದಂದು || ಕಂದ || ವೀರದ ಬಲ್ಪಿಂ ನೆಗಳ್ದೀ ಧಾರಿಣಿಯೊ . .
5 ಜದೆ ತಾಳದ ವಿಜಯಶ್ರೀರಮಣನಮಳಕೀರ್ತ್ಯಾಧಾರಂ ಬಲ್ಲಾಳದೇವನೆ-
6 ಸದಂ ಧರೆಯೊಳು | ಅರಿನೃಪರಂ ಬೆಂಕೊಳ್ವಂ ಬಿರುದರ ಗಂ-
7 ಡಲೆವನ . . . . ಮಾರ್ಕೊಳ್ವಂ ಘುರದೊಳದಿರಿ . . . . ಸಂಹರಿಸುವ ಕಲಿ ನೆ-
8 ಗಳ್ದನಲ್ತೆ ಬಲ್ಲಾಳನೃಪಂ || ಸ್ವಸ್ತಿ ಸಮಸ್ತಪ್ರಶಸ್ತಿಸಹಿತಂ ಯಾದವಕುಳಾಂ-
9 ಬರದ್ಯುಮಣಿ ಸ(ಂ)ಮ್ಯಕ್ತಚೂಡಾಮಣಿ ಮಲರಾಜರಾಜ ಮಲಪರೊಳು ಗಂ-
10 ಡ ಶನಿವಾರಸಿದ್ಧಿ ಗಿರಿದುರ್ಗ್ಗಮಲ್ಲ | ನಸಹಾಯಶೂರನೇಕಾಂಗವೀರ ನಿಸ್ಸಂ-
11 ಕಪ್ರತಾಪಚಕ್ರವರ್ತ್ತಿ ಹೊಯ್ಸಳ ವೀರಬಲ್ಲಾಳ[ದೇವರು] . . ಗುಂಡಿಯ ನೆಲೆವೀಡಿನೊ-
12 ಳು ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ || ಕಂದ || ವೊದವಿದ
13 ಕುಂತಳದೇಶಕ್ಕಿದು ಕಂನಡಿ . . . . ಪಾಂಡ್ಯವಿಷಯಂ ಸೊಗಯಿಪ್ಪು-
14 ದು ನಾಡೆ ಚೆಲುವಿನಿಂ . . . . . . . ಸಮಸ್ತ . . ಸಂಚಯದಿನೆತ್ತಂ || ಕ || ಅಂ-
15 ತೆಸೆವ ಪಾಂಡ್ಯವಿಷಯಕ್ಕಂತಿದು [ರಮಣೀ]ಮುಕುರಮಾಗಿ ಕೋಗಳಿಯಯ್ನೂ-
16 ಱಂತರ ಬಸಂತ . . . . . . . . ನಿಸಿ ಸೊಗಯಿಸಿ ತೋರ್ಕ್ಕು || ವ ||
17 ಅಂತೆಸೆವ ಕೋಗಳಿಯಯ್ನೂಱಱೊಳಗೆ ಮುತ್ತಗೆ ಮೂವತ್ತಕ್ಕಂ ಶಿರೋಮಣಿಯೆ-
18 ನಿಪ ಮುತ್ತಗೆಯ ಪ್ರಭುಗಳ ಗುಣಸ್ತುತಿಯೆಂತೆನೆ ಕಂದ || ವಿಭವದೊಳೂ-
19 ರ್ಜ್ಜಿತತೇಜಪ್ರಭವದೊಳಾಶ್ರಿತ . . . . ರಕ್ಷಿಸುವಾ ಪ್ರಭುತೆಯೊ-
20 ಳು ದಾನಗುಣದೊಳು ಪ್ರಭು ಬೊಮ್ಮಯ್ಯಂಗೆ ಸಮನೆನಿಪ್ಪವನಾವಂ || ಕಂ ||
21 ಪೆರ್ಮ್ಮೆಗೆ ವಿನೂತಕೀರ್ತ್ತಿಗೆ ನಿರ್ಮ್ಮಳ . . . . ನೇಳ್ಗೆಗೌದಾರಕ್ಕಂ ನೂರ್ಮ್ಮಡಿ-
22 ಯೆನಿಪ ಮಹಾಪ್ರಭು ಭೊಮ್ಮಯ್ಯಂಗ . . . . ವಸುಧಾತಳದೊಳೂ || ವಚ ||
23 ಅಂತವರ್ಸ್ಸುಖದಿನಿರೆ ಪ್ರತಾಪಚಕ್ರವರ್ತ್ತಿ ಹೊಯ್ಸಳ ವೀರಬಲ್ಲಾಳದೇವರ ಶ್ರೀಪಾದಪ-
24 ದ್ಮೋಪಜೀವಿ ಮಹಾಪಸಾಯಿತಂ ಲೆಂಕ . . . ದಧಿಷ್ಟಾಯಕನಪ್ಪ ಸಾವಾಸಿ ರಂಗಯ್ಯ-
25 ನ ಹೆಗ್ಗಡೆಯಂಮ್ಮೆಳೆಯ ವೂರಡೆಯ ವಿಷ್ಣು ನಾಯಕರ ಹರಿಯಣ್ಣನಾತನ ಗುಣಸ್ತು-

26 ತಿಯೆಂತೆನೆ ॥ ಕ ॥ ನುತವಿಪ್ರಾನ್ವಯತಿಳಕಂ ಪತಿಹಿತನತಿಶಯವಿನೂತಧರ್ಮ್ಮಪರಂ ಸ(ಂ)-
27 ನ್ನುತಮಂತ್ರಿ ಹರಿಹರಾಂಕಂ ಕ್ಷಿತಿಯೊಳು ಸಲೆ ನೆಗಳ್ದನೆಂದಡೇ ವಣ್ಣಿಪ್ರುದೋ ॥
28 ಅ(ಂ)ನ್ತು ನೆಗಳ್ದ ಹರಿಯಣ್ಣನು ಮುತ್ತಗೆಯ ಹೆಗ್ಗಡೆತನಂ ಮಾಡುವಲ್ಲಿಯಲ್ಲಿಯ ಪ್ರ-
29 ಭು ಬೊಪ್ಪಯ್ಯಬಮ್ಮಯ್ಯನ ಕೆಯ್ಯಲು ಧಾರಾಪೂರ್ವ್ವಕವಾಗಿ ಭೂಮಿಯನು ಹಡೆ-
30 ದು ಅಱವಂಟಗೆ ಉದಕದಾನಕ್ಕಂ . . . . . ನಿಕ್ಕಿ ಧರ್ಮ್ಮವಾಚಂದ್ರಾರ್ಕ್ಕತಾ-
31 ರಂಬರಂ ಸಲುವಂತಾಗಿಯಮಾಸೆಯಾದಿತ್ಯವಾರ ವ್ಯತೀಪಾತ ಸಂಕ್ರಮಾ-
32 ಣ ಸೂರ್ಯ್ಯಗ್ರಹಣದಲು ಬಿಟ್ಟ . . . . . ಳ್ಳಿಯದಾರಿಯಿಂ ತೆಂಕಲು ಮೂ-
33 ಡಣ ಮೇರೆಯೆರೆಯಬಾಗು ತೆಂಕಣಮೇರೆ . . . . ಪಳ್ಳ ಪಡುವಣ ಮೇರೆ ದೊಡ್ಡಬದು-
34 ಹು ಬಡಗಣಮೇರೆ ಯೀಶಾನ್ಯ . . . . . . . ಯಿಂತು ಚತುರಸ್ರ ಕೋಗ-
35 ಳಿಯ ಗಡಿಂಬದಲು ಮತ್ತರು ೧ ೭ ಕ ॥ ಮನವೊಸೆದು ಹರಿಹರಾಂಕಂ ವಿನು-
36 ತಯಶೋಮೂರ್ತ್ತಿಯುದಕದಾನಕ್ಕಿತ್ತಂ ಜನವಿನುತಮಾಗೆ ಭೂಮಿಯನೆನಸುಂ
37 ಚಂದ್ರಾರ್ಕ್ಕತಾರಮುಳ್ಳಂನೆವರಂ ॥ ಯಿಂತೀ ಧರ್ಮ್ಮವಂ ಪ್ರತಿಪಾಳಿಸಿದವರು ವಾ-
38 ರಣಾಸಿಯಲು ಸಹಸ್ರಧೇನುವನು ಸಬ್ರಾಹ್ಮಣರಿಗೆಯಲಂಕಾರಸಹಿತ ಕೊ-
39 ಟ್ಟ ಫಲ ಯೀ ಧರ್ಮ್ಮಮನಪಹರಿಸಿದವರು ಗಂಗೆಯ ತಡಿಯಲು ಗೋವು ಬ್ರಾಹ್ಮರ-
40 ನು ಸ್ವಹಸ್ತದಲು ವಧಿಸಿದ ಪಾಪ ॥ ಶ್ಲೋ ॥ ಸ್ವದತ್ತಂ ಪರದತ್ತಂ ವಾ ಯೋ ಹರೇತಿ ವಸುಂ-
41 ಧರಾಂ ಷಷ್ಠಿರ್ವ್ವರ್ಷಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿ[ಃ*] ॥ ಮಂಗಳ ಮಹಾಶ್ರೀ[॥*]

## No. 333.

(*A.R. No.* 126 *of* 1913.)

ON A SLAB SET UP IN THE VENUGOPALASVAMI TEMPLE AT MAGALA, HADAGALLI TALUK, SAME DISTRICT.

The record is dated **Śaka 1136, Bhāva, Chaitra, śu. 11, Bṛihaspativāra.** The late Mr. Swamikannu Pillai has remarked on this date as follows :—" = A.D. 1215 Thursday March 2 ; .48. *N.B.* A.D. 1214–15 was Bhāva and Śaka 1136 but the Chaitra here referred to is Chaitra at the end not Chaitra at the beginning of the year (*vide* section I11 of Indian Chronology) ". But it may be noted that it was not a day of Saṅkramaṇa. The inscription refers itself to the reign of the Hoysaḷa king **Vishṇuvardhana Vīra-Ballāḷa (II).** The *Ūroḍeyas* **Harihara** and **Gōvinda,** two learned Brāhmans, are stated to have consecrated the image of Śrī-Gōpāla and, with the *Mahājanas* of **Māṇgoḷa,** made grants of land and houses for conducting the worship of the god. The genealogy of Harihara and Gōvinda is given and the Brāhman general and minister of the king named **Mādhava** is praised as a great warrior.

1 ಸ್ವಸ್ತಿ ಶ್ರೀಜಯಾಭ್ಯುದಯಶ್ಚ ॥ ನಮಸ್ತಸ್ಮೈ ವರಾಹಾಯ ಲೀಲಯೋದ್ಧರತೇ ಮಹೀಂ । ಖುರಮಧ್ಯ-
ಗತೋ ಯಸ್ಯ ಮೇರುಃ
2 ಖಣಖಣಾಯತೇ ॥ ಧಾತಾ ಯಸ್ಯ ತನೂಭವಸ್ಸುರಸರಿದ್ಯತ್ಪಾದಜಾ ಪಾವನೀ ಯದ್ದಂಷ್ಟ್ರೇಣ ದ್ಧೃತಾ
ಪುರಾ ಪರಹಿತಾ ಕ್ರೋ-
3 ಡಸ್ಯ ವಿಶ್ವಂಭರಾ ಸರ್ವ್ವಸಾಂ ಸದನೇ ವಸತ್ಯನುದಿನಂ ಗೋಪ್ಯಾಂ ಯ ಏಕೋಪಿ ಸಃ ಶ್ರೀಗೋಪಾಳ-
ಮಹಾವಿಭುರ್ದ್ದನುಜಜಿಚ್ಚಕ್ರೇಶ್ವ-
4 ರಃ ಪಾತು ವಃ ॥ ಶ್ರೀಕಾಂತೋರಸ್ಥಳಾಲಿಂಗಿತಭುಜಯುಗಶಾಖಾಕರಾಗ್ರಪ್ರವಾಳಪ್ರಾಕಾರೋದ್ಭಾಸಿ
ಬಾಸ್ವದ್ರತ್ನ-
5 ಖಚಿತಕರ್ಣ್ಣಾವತಂಸಂ ಸುಪುಷ್ಪಾನೀಕಂ ದಾತೃತ್ವಸತ್ವಂ ಫಳಮಗಣಿತಗೋಪಾಳಕಲ್ಪದ್ರುಮಂ ತ್ರೈಲೋ-
ಕ್ಯೈಕಾಧಾರನಿ(ಂ)ನ್ನೂರ್ಧ್ವ
6 ರಿಗಭಿಮತಮಂ ಮಾಳ್ಕತಿಪ್ರೀತಿಯಿಂದಂ ॥ ಶತಮ(ಂ)ನ್ಯುಸ್ತುತನಬ್ಜನಾಭನಖಿಳಶ್ರೀಗೋಪಕನ್ಯಾವರಾ-
ವೃತವೃಂದಾವನಮ-
7 ಧ್ಯಗೋಪನಿವಹಪ್ರೋದ್ಭಾಸಿಹೇಮಾಂಬರೋ(ಂ)ನ್ನತಸೂತ್ರಂ ಕಟಿಯೊಳ್ಪೊದಳ್ದಸೆಯಲುದ್ಯ(ಂ)-
ನ್ವೇಣುನಾದಂಗಳಿಂ ಕೃತಿಯಂ ಬಾಜಿ-

8 ಪ ಗೋಪಿನಾಥನೊಲ್ದಿಗಿಷ್ಟಾರ್ತ್ಥಸಂಸಿದ್ಧಿಯಂ ॥ ಗದ್ಯ ॥ ಅನ್ತೀ ಪರಮೇಶ್ವರಂ ಸಮಸ್ತಧರ್ಮ್ಮಪರಿ-
ತ್ರಾಣಾರ್ತ್ಥಕವರಾಹದೇಹೋಧೃತರು-

9 ಚಿರವಸುಮತಿಕಾನ್ತಾನಿತಂಬಪ್ರದೇಶಭೂಷಣಾಯಮಾನಕನಕವಸನರತ್ನಖಚಿತಕಟಿಸೂತ್ರದಂತೆಸೆವ ಸ-
ಮುದ್ರದ ಮ-

10 ಹಿಮೆಯೆ(ಂ)ನ್ತೆಂದಡೆ ॥ ವೃತ್ತ ॥ ಗಂಭೀರಸ್ಫಾರವೇಳಾಬಹಳಪರಿವೃಢಲ್ಲೋಲಕಲ್ಲೋಳಮಾಳಾರಂಭೆ-
ಪ್ರೋಡ್ಡೀನಫೇನಪ್ರಬಳಜಳಚರ-

11 ಲ್ಲೋಳಪಾಠೀನಕುಂಭಿಕ್ಷುಂಭೀರಾಭೀಳನಕ್ರಪ್ರಕರಕಮಠನೀರೇಭರತ್ನಪ್ರಭಾವೋಜ್ಜೃಂಭಪ್ರೋದ್ಭಾಸಿ-
ವೀಚೀನಿಚಯಘನಘನಧ್ವಾನ-

12 ರೌದ್ರಂ ಸಮುದ್ರಂ ॥ ವ ॥ ಆ ಸಮುದ್ರಮುದ್ರಿತಮಪ್ಪ ಜಂಬೂದ್ವೀಪಮಧ್ಯವರ್ತ್ತಿ ಮೇರುವಿಂ ದಕ್ಷಿಣಾ-
ದಿಗ್ಭಾಗದೊಳು ॥ ವೃ ॥

13 ವಿಳಸದ್ಭಾರತವರ್ಷಮಂತದರೊಳುದ್ಯದ್ದಕ್ಷಿಣಾಶಾಮಹೀವಳಯಂ ಕುನ್ತಳದೇಶವಲ್ಲಿ ಚೆಲ್ವಂ ತಾಳ್ದಿರ್ದ್ದ
ಪುಂಡ್ರೇಕ್ಷುವಿಂ ಕಳಮಶ್ರೇಣಿಗಳಿಂ

14 ವನೋಪವನದಿಂ ತದ್ರಾಜಹಂಸಂಗಳಿಂ ಸಲೆ ರಂಜಿಪ್ಪ ನೊಣಂಬವಾಡಿ ಯೆಸೆಗುಂ ವಿಶ್ವಂಭರಾಭಾಗದೊಳು ॥
ಅನ್ತಾ ನೊಣಂಬವಾಡಿಯನಾ-

15 ಳುವ ದಕ್ಷಿಣಚಕ್ರವರ್ತ್ತಿ ವಿಷ್ಣುವರ್ದ್ಧನವೀರಬಲ್ಲಾಳುದೇವನನ್ವಯಮೆಂತೆ[ಂ]ದಡೆ ॥ ಕಂ ॥ ವಿಳಸ-
ದ್ವಿಶಿಷ್ಟಹೃದ್ಯಾಖ್ಯಕುಳದ ತಮಂ

16 ಪರೆಯೆ ಹೊಯ್ಸಣಾನ್ವಯಭೂಭೃತ್ತುಳದಿಂದಮೊಗೆದು ನಿಜಭುಜಬಲವೆ ಜಗಚ್ಚಕ್ಷುವೆನಿಪ ವಿನೆಯಾ-
ದಿತ್ಯಂ ॥ ಗದ್ಯ ॥

17 ತತ್ಪುತ್ರೋಹ್ಯೆಚೆಯಂಗನೃಪಸ್ತಸ್ಯಾಗ್ರಮಹಿಷೀ ನಿಖಿಳಸೌಭಾಗ್ಯನಿಳಯಾ ಏಚಲದೇವೀ ತಯೋಃ
ಪುತ್ರಾಃ ಉದಯಾ-

18 ದಿತ್ಯಬಲ್ಲಾಳವಿಷ್ಣುವರ್ದ್ಧನ ನಾಮಾನಃ ತೇಷಾಂ ಮಧ್ಯೇ ನಿಖಿಳರಾಜ್ಯವಿಭವಸ್ಯವಿಷ್ಣುವರ್ದ್ಧನನಾಮ-
ಮಹಾರಾಜಸ್ಯ ಮಹಾಲಕ್ಷ್ಮೀ ರಾಜ್ಞೀ ।

19 ತತ್ತನೂಜೋ ನರಸಿಂಹದೇವಮಹಾನೃಪ ಆಸೀತ್ । ತದಗ್ರಮಹಿಷೀ ಶ್ರೀಮದೇಚಲದೇವೀತಿ ವಿಖ್ಯಾತಾ ।
ತತಸ್ತಸ್ಯಾ-

20 ಮಾವಿರಾಸೀದ್ವೀರಬಲ್ಲಾಳಪೃಥ್ವೀಪತಿಃ ॥ ವೃ ॥ ಮಾಳವಕಾಲರೂಪ ಮಗಧೇಶ್ವರಪಂನಗವೈನತೇಯ
ಪಾಂಚಾಳಪ-

21 ಯೋಧಿಬಾಡವ ತುರುಃಕಧರಾಧರವಜ್ರದಂಡ ನೇಪಾಳಮನೋಜಕಾಳಗಳ ಗುರ್ಜ್ಜರವೈರಿಭಸಿಂಹ
ವೀರಬಲ್ಲಾಳ-

22 ನೃಪಾಳ ನಿ(ಂ)ನ್ನ ಸಮನಾರ್ಭ್ಭುವನಾಧಿಪರೀ ಧರಿತ್ರಿಯೊಳು ॥ ಸ್ವಸ್ತಿ ಸಮಸ್ತಭುವನಾಶ್ರಯಂ
ಶ್ರೀಪೃಥ್ವೀವಲ್ಲಭಂ

23 ಮಹಾರಾಜಾಧಿರಾಜ ಪರಮೇಶ್ವರಂ । ದ್ವಾರಾವತೀಪುರವರಾಧೀಶ್ವರಂ । ಯಾದವಕುಳಾಂಬರದ್ಯುಮಣಿ ।
ಸ(ಂ)ಮ್ಯ-

24 ಕ್ತ್ವಚೂಡಾಮಣಿ ಮಲೆರಾಜರಾಜ । ಮಲಪರೊಳ್ಗಂಡ । ಕದನಪ್ರಚಂಡನೇಕಾಂಗವೀರ । ನಸಹಾಯಶೌ-
ರ್ಯ್ಯ । ಶನಿ-

25 ವಾರಸಿದ್ಧಿ ಗಿರಿದುರ್ಗ್ಗಮಲ್ಲ ಚಲದಂಕರಾಮ ನಿಶ್ಯಂಕಪ್ರತಾಪಚಕ್ರವರ್ತ್ತಿ ಹೊಯ್ಸಣ ವಿಷ್ಣುವರ್ದ್ಧನ-
ವೀರಬಲ್ಲಾಳದೇವ-

26 ನು ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ ॥ ತತ್ಪಾದಪದ್ಮೋಪಜೀವಿ ॥ ವೃ ॥ ಕುಸುಮ-
ಶರಂಗೆ ತಾನಧಿಕನರ್ಕ್ಕ-

27 ಜನಿಂದೆ ವಿಶೇಷವಾರ್ಪ್ಪಿನೊಳ್ ಶ್ವಸನತನೂಜನಿಂ ಮಿಗಿಲು ರೂಪಿನೊಳೀವೆ ಗುಣಪ್ರಭಾವದೊಳ್ಮಸುಪ
ಭುಜಪ್ರತಾಪದೊಳು ಪೇ-

28 ಳಮೃತೇಶಪದಾಬ್ಜಭೃಂಗನೀ ಮಸಣೆಯದಂಡನಾಥನವೊಲಾರ್ದ್ದೊರೆ ಮಂತ್ರಿಗಳೀ ಧರಿತ್ರಿಯೊಳು ॥
ವಂದಿಬ್ರಾತವಿಶಿಷ್ಟದಾನಭೂ-

29 ವನಪ್ರಖ್ಯಕ್ತಕಲ್ಪದ್ರುಮಃ ಸೌಖ್ಯೇ ಭಾತಿ ಶಶಾಂಕನಿರ್ಮ್ಮಳತರಃ ಪ್ರತ್ಯಕ್ಷಲಕ್ಷ್ಮೀಪತಿಃ ಸೋಯಂ ವೈ-
ರಿನಿಕಾಯಖಂಡನಮಹ-

30 ದ್ದೋರ್ದ್ದಂಡಯುಗ್ಮಾ(ಂ)ನ್ವಿತೋ ಜೀಬ್ಯಾನ್ಮಾಧವನಾಯಕ[ಃ*] ಸ್ಥಿರತರಂ ಯಾವದ್ರವಿರ್ವರ್ತ್ತತೇ ॥ -ರ್ಯ- ॥ ಸ್ವಸ್ತಿ ಯಮನಿಯಮಸ್ವಾಧ್ಯಾಯಧ್ಯಾನ-

31 ಧಾರಣಮೌನಾನುಷ್ಠಾನಜಪಸಮಾಧಿಶೀಲಗುಣಸಂಪನ್ನರೋಪಾಸನಾಗ್ನಿಹೋತ್ರದ್ವಿಜಗುರುದೇವತಾಪೂಜಾತತ್ಪರರುಂ । ಮಾ-

32 ರ್ತ್ತಂಡೋಜ್ವಳಕೀರ್ತ್ತಿಯುತರುಂ । ಶ್ರೀಮಂನರಸಿಂಹದೇವರ ದಿಬ್ಯಶ್ರೀಪಾದಪದ್ಮಾರಾಧಕರುಮಪ್ಪ ಶ್ರೀಮತ್ಸರ್ವ್ವನಮಶ್ಯದನಾದಿಯ-

33 ಗ್ರಹಾರಂ ಮಾಂಗೊಳದೂರಡೆಯಪ್ರಮುಖನಶೇಷಮಹಾಜನಂಗಳ ಪ್ರಿಯಪುತ್ರರಪ್ಪೂರಡೆಯಸಂತಾನ ವಿಪ್ರಪ್ರಸಾದ ಹ-

34 ರಿಹರದೇವನನ್ವಯಮೆಂತೆಂದಡೆ ॥ ವೃ ॥ ವಸುಮತಿಯೆಂಬ ಕಾಂತೆಯ ಪಯೋಧರಮೌಕ್ತಿಕಹಾರದನ್ತೆ ಕಣ್ಗೆಸೆವ ಮಹಾಗ್ರಹಾರ-

35 ಮೆನಿಪ್ಪ ಗೆಯೊಳ್ವರಕಶ್ಯಪಾನ್ವಯಂ ಪಸರಿಸೆ ಪು(ಂ)ಣ್ಯಮೂರ್ತ್ತಿ ವಿರುಪಾಕ್ಷನ ಸಾಧ್ವಿ ಪತಿಬ್ರತಾಮ-ದಾಲಸೆಯರಸೌವ್ವೆಗುತ್ಸವ-

36 ದೆ ಪುಟ್ಟಿದ ಸೋಮನಿಳಾತಳಾಗ್ರದೊಳು। ಆ ವಿಪ್ರೋತ್ತಮ ಸೋಮನಾಥನ ಕುಲಸ್ತ್ರೀರತ್ನ ಸಾವಿತ್ರಿಯಪ್ಪೀ ವಿಖ್ಯಾತೆಯ ನನ್ದನರ್ಹ-

37 ರಿಹರಂ ತಾನಗ್ರಜಂ ವಿಶ್ವವಿದ್ಯಾವಿಸ್ತಾರನುದಾರನಾತನನುಜಂ ಗೋವಿಂದನೊಲ್ದರ್ತ್ಥಿಯಿಂದೀವಂ ಶಿಷ್ಟಜನಕ್ಕಭೀಷ್ಟಫಳಮಂ ಲೋಕೈಕಕ-

38 ಲ್ಪದ್ರುಮಂ ॥ ಕ ॥ ಹರಿಹರನ ವನಿತ ಲಕ್ಷ್ಮಿಗೆ ದೊರೆಯೆನಿಸುವ ರೇಕಿಯಕ್ಕನೊಳ್ಪುನಿಯಿಸಿದರ್ದ್ಧರೆಯೊಳಗೆ ವಿಷ್ಣುಸೋಮಂ

39 ವರಚಾವುಂಡಾಖ್ಯ ನೃಹರಿಯೆನಿಪ ತನೂಜರು ॥ ಆತನೊಡವುಟ್ಟಿದಂ ಮನುನೀತಿಲಸನ್ಮಾರ್ಗನೆನಿಪ ಗೋವಿಂದನ ಸತ್ಪ್ರೀತಿಯ ಸತಿ

40 ಚಾಮವ್ವೆಗೆ ಜಾತಂ ಧರೆಯೊಳಗೆ ಹರಿಹರಾಖ್ಯತನೂಜಂ -ರ್ಯ- ಸ್ವಸ್ತಿ ಶ್ರೀಮತ್ಶಕವರ್ಷದ ೧೧೩೬ನೆಯ ಭಾವಸಂವತ್ಸರದ ಚೈತ್ರ ಶುದ್ಧ ಏಕಾ-

41 ದಶಿ ಬೃಹಸ್ಪತಿವಾರ ಸಂಕ್ರಮಣ ವ್ಯತೀಪಾತದಂದು ಊರಡೆಯ ಸಂತಾನ ಹರಿಯಣ್ಣಗೋವಿಂದದೇವನವರ ಭಾವ ವಿರುಪಯ್ಯವಿನ್ನಿಬರುಂ

42 ಶ್ರೀಮದಗ್ರಹಾರಂ ಮಾಗೊಳದ ಗ್ರಾಮಮಧ್ಯದಲ್ಲಿ ಶ್ರೀಗೋಪಾಳದೇವರ ಪ್ರತಿಷ್ಠೆಯ ಮಾಡಿ ಊರಡೆಯಪ್ರಮುಖಶ್ರೀಮದಶೇಷಮ-

43 ಹಾಜನವಿಂನೂಬ್ಬರ್ಸ್ವಾಮಿಗಳ ಶ್ರೀಪಾದಪದ್ಮಗಳಗೆ ಸುವರ್ಣ್ಣಪುಷ್ಪದಿಂದಾರಾಧಿಸಿ ನಮಸ್ಕಾರಂ ಮಾಡಲಾ ಮಹಾಜನಂಗಳು ರಾಜಾಧ್ಯಕ್ಷಸಹಿ-

44 ತವಾ ದೇವರ ರಂಗಭೋಗನೈವೇದ್ಯನಂದಾದೀವಿಗೆಚೈತ್ರಪವಿತ್ರಸ್ಫುಟಿತಖಣ್ಡಿತಜೀರ್ಣ್ಣೋದ್ಧಾರಕ್ಕಂ ಸರ್ಬ್ಬಾಬಾಧಪರಿಹಾರವಾಗಿ ಊರಡೆಯ-

45 ರ ಶ್ರೀಮಾನ್ಯದೊಳಗೆ ಬಿಟ್ಟ ಭೂಮಿ ಹಿರಿಯೂರಡೆಯರ ಮೊದಲಹಸುಗೆ ಕೊಡೆಯಾಲದಲ್ಲಿ ಮಾನಿಯೊಳಗೆ ಕೆಂಗಾಡು ಮತ್ತರೊಂಭತ್ತು ।

46 ಮಂನೆಯಗೆಱೆಯ ಕೆಳಗೆ ಹಿರಿಯೂರಡೆಯರ ತೋಟಗಟ್ಟು ಮತ್ತರೆರಡು ದೇವಿಂಗೆಱೆಯೊಳಗೆ ನಡುವಣೂರಡೆಯರ ಮಾಹಿಕೊಚೆಣ್ಣಂ-

47 ಗಳ ಎರೆಮತ್ತರೈದು ಅಲ್ಲಿ ಕೆಱೆಯಮೊದಲ ತಂಡಗದಕೊಚೆಣಂಗಳ ಸ್ಥಳ ಮತ್ತರೆರಡು ಅಲ್ಲಿ ಬ್ರಹ್ಮದೇವಪಟ್ಟವರ್ದ್ಧನರ ಸ್ಥಳ ಮತ್ತರೆರಡು ।

48 [1]ಕೆಱೆಯ ಮೊದಲ

49 ಚಂದ್ರಮಂಚಿಯಣ್ಣಂಗಳ ಮಗ ಗುಂಡದೇವಪದ್ದಿ ಬನ್ನಿಯ ಬೆನಕನಲ್ಲಿ ಶ್ರೀಧರದೇವರ ಕೆಯ್ಯಿಂ ಬಡಗ ನಾಕಱಹಸುಗೆಯಲು ಕೊಟ್ಟ ಮತ್ತರು ನಾಲ್ಕು

50 ಗೊಳಗನ ಕಟ್ಟೆಯಲ್ಲಿ ಮಹಾಜನಂಗಳ ಕೈಯ್ಯಲು ಧಾರೆಗೊಂಡ ಕೆಯಿ ಮತ್ತರು ಮೂಱು । ಊರಡೆವಾಳ ಮೊದಲಹಸುಗೆ ಉಂ-

51 ಡಿಗೆ ಮತ್ತರು ನಾಲ್ಕು । ಊರಡೆಗೇರಿಯೊಳಗೆ ಬಾವಿಯಿಂ ಪಡುವ ಬ್ರಹ್ಮದೇವಪಟ್ಟವರ್ದ್ಧನರು ಕೊಟ್ಟ ತೆಂಕವಾಗಿಲ ಮನೆಯೊಂದು ಊರಡೆದ-

52 ಡದ ಬಡಗಣ ಮೂಡಣ ಗೋಟಿನಲ್ಲಿ ಬ್ರಹ್ಮದೇವಪಟ್ಟವರ್ದ್ಧನರು ಕೊಟ್ಟ ತೆಂಕವಾಗಿಲ ತುಡುಕೆಯೊಂದು ॥ ಇನ್ತೀ ಧರ್ಮ್ಮಮನಿನ್ನೂರ್ವ್ವರುಂ ಪ್ರತಿ-

---

[1] Some space is left blank at the beginning of this line.

53 ಪಾಳಿಸುವರು ‖ ಈ ಧರ್ಮ್ಮಮಂ ಪ್ರತಿಪಾಳಿಸಿದವರು ಅಮಾವಾಸ್ಯೆ ಸೋಮವಾರ ಸೂರ್ಯ್ಯಗ್ರಹಣ
ವ್ಯತೀಪಾತ ಸಂಕ್ರಮಣವಿನ್ತೀ ಮಹಾತಿ-

54 ಥಿಯಂದು ಸಾವಿರ ಕವಿಲೆಗಳ ಕೋಡುಂ ಕೊಳಗಿನಲು ಸುವರ್ಣ್ನದಿಂ ಕಟ್ಟಿಸಿ ವೇದಪಾರಗತರಪ್ಪ ಸಹಸ್ರ-
ಬ್ರಾಹ್ಮಣರಿಗೆ ವಾರಣಾಶಿಕುರುಕ್ಷೇತ್ರ-

55 ದಲು ದಾನಮಂ ಕೊಟ್ಟ ಫಲಮಕ್ಕು ‖ ಇನ್ತೀ ಧರ್ಮ್ಮ(ಂ)ಮನಳಿದವರಾ ತಿಥಿಯಲಾ ಕವಿಲೆಗಳನಾ ಬ್ರಾ-
ಹ್ಮಣರುವನಾ ಕ್ಷೇತ್ರದಲು ಸ್ವಹಸ್ತದಿಂ ಕೊಂದ ಮ-

56 ಹಾಪಾತಕನಕ್ಕು ‖ ಸ್ವದತ್ತಂ ಪರದತ್ತಂ ವಾ ಯೋ ಹರೇತಿ ವಸುಂಧರಾ[ಂ*] ಷಷ್ಠಿರ್ವರ್ಷಸಹಸ್ರಾಣಿ
ವಿಷ್ಟಾಯಾಂ ಜಾಯತೇ ಕ್ರಿಮಿ[ಃ*] ‖ ಮಂಗಳ ಮಹಾಶ್ರೀ ಶ್ರೀ

## No. 334.

(*A.R. No.* 68-*A of* 1904).

ON A SLAB LYING ON THE RIGHT SIDE OF THE ENTRANCE OF THE CENTRAL SHRINE OF THE BENAKAPPA TEMPLE AT ORUVAY, BELLARY TALUK, SAME DISTRICT.

This is dated the cyclic year **Īśvara, Śrāvaṇa, ba. 30, Śukravāra, Sūrya-grahaṇa,** corresponding to **A.D. 1217, August 4 Friday,** with a solar eclipse. It belongs to the reign of the Hoysaḷa king **Vīra-Ballāḷa (II).** *Raṇadhavala* **Basavaṇa-Daṇḍanāyaka,** who is described as the rescuer of Ballāḷa's suzerainty, is stated to have granted some land for the service of the god Vināyaka. **Echaseṭṭi** is stated to have granted the Vināyaka-sthāna to **Chīlarāśi-guru,** the disciple of **Bhīmarāśi-guru**; the *sthala* of **Kampile** and the four *Nāḍus* made a gift of tolls on bullocks to Echaseṭṭi.

1 ಸ್ವಸ್ತಿ [‖*] ಶ್ರೀಮತು ಯಾದವನಾರಾಯಣಂ ಪ್ರತಾಪಚ-
2 ಕ್ರವರ್ತ್ತಿ ಹೊಯ್ಸಳ ವೀರಬಲ್ಲಾಳದೇವರಾಜ್ಯಸಮು-
3 ದ್ಧರ ಬಸವಣದಂಡನಾಯಕಗುಣಪ್ರಭಾವವೆಂತೆಂದ-
4 ಡೆ ‖ ನುಡಿವಂ ಸತ್ಯವಚೋಕ್ತಿಯಿಂ ಸಕಳಧರ್ಮ್ಮಬ್ಯಾ-
5 ಪ್ತಿಯಿಂದರ್ತ್ಥಮಂ ಪಡೆವ ವಿಪ್ರಸುರಾದಿಶಿಷ್ಟಜನ-
6 ತಾಸಂತುಷ್ಟಿಯಾಗಲ್ಕೆ ತಾ ಕುಡುವಂ ದ್ರವ್ಯಮನೀ ಗು-
7 ಣಾಶ್ರಯಮುಮಂ ಲೋಕಂ ಬಬಾಪ್ಪೆಂಬಿನಂ ಪಡೆದಂ ಸದ್ಗುಣಿ
8 ದಂಡನಾಥ ಬಸವಂ ಪ್ರಖ್ಯಾತಿಯಂ ಕೀರ್ತ್ತಿಯಂ ‖ ಕಲಿಯುಮ್ಮೃತದಂಡ-
9 ನಾಥರ ಲಲಿತಾತ್ಮಜನೆಂಮೊಡೊಪ್ಪುಗುಂ ಕಲಿತನಮುಂ ಸಲೆ ಸತ್ಯಾ-
10 ಮೃತವಾಕ್ಯಂ ಕುಲತಿಳಕಂ ಬಸವದಂಡನಾಥಾಧಿಪನೊಳ್ ‖ ಶ್ರೀಮ-
11 ದೀಶ್ವರಸಂವತ್ಸರದ ಶ್ರಾವಣ ಬಹುಳ ಅಮಾವಾಸ್ಯೆ ಶುಕ್ರವಾ-
12 ರ ಸೂರ್ಯ್ಯಗ್ರಹಣದಂದು ಶ್ರೀವಿನಾಯಕದೇವಗ್ಗ್ರ ರಣಧ-
13 ವಳ ಬಸವಚಮೂಪಂ ಧಾರಾಪೂರ್ಬ್ಬಕಂ ಮಾಡಿ ಕೊಟ್ಟ ಕೆಯಿ ತಂ-
14 ಕವ್ರೊಲದಲ್ಲಿ ಚಿಕ್ಕಡ್ಡದಾರಿಯಿಂ ಬಡಗಲಿಬ್ಬಡಗಲಾಗಿ ಹಿರಿ-
15 ಯಕೋಲ ಮ ೨ । ಇಂತನಿತು ಹಿರಿಯಕೋಲ ಮತ್ತರು ಗಳೆಊರ
16 ಪಿಂತಣ ತೋಟ ೧ ಇಂತೀ ವಿನಾಯಕದೇವಸ್ಥಾನಮಂ ಭೀಮರಾಶಿಗು-
17 ರುಗಳ ದೀಕ್ಷೆಯ ಮಗಂ ಚೀಲರಾಶಿಗುರುಗೆಳ್ಗೆ ದೇವಬ್ರಾಹ್ಮಣ-
18 ಪಾದಾರಾಧಕನಪ್ಪ ಬಲಿಯೇಚಸೆಟ್ಟಿ ಧಾರಾಪೂರ್ಬ್ಬಕಂ ಮಾಡಿ ಚೀಲರಾ-
19 ಶಿಗೆ ಕೊಟ್ಟನು ಕುಱುಗೋಡ ಕಂಪಿಲೆಯ ಸ್ಥಳವುಂ ನಾಲ್ಕುನಾಡುಂ ಎತ್ತ-
20 ನಶಾಸನವಂ ಏಚಸೆಟ್ಟಿಗೆ ಮಾನ್ಯಂ ಮಾಡಿ ಕೊಟ್ಟರು ‖ ಸ್ವದತ್ತಾಂ ಪ-
21 ರದತ್ತಾಂ ವಾ ಯೋ ಹರೇತಿ ವಸುಂಧರಾಂ ‖ ಷಷ್ಟಿರ್ವ್ವರ್ಷಸಹ-
22 ಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿ[ಃ*] ‖

## No. 335.

(*A.R. No.* 743 *of* 1922).

ON A PILLAR IN THE MANDAPA OF THE RUINED SIVA TEMPLE ON THE BANK OF THE NARIHALLA AT TALURU, HOSPET TALUK, SAME DISTRICT.

This is dated **Bahudhānya, Jyēshṭha, ba. 15, Ādivāra** corresponding to **A.D. 1218 June 4, Sunday,** in the reign of the Hoysaḷa king **Vīra-Ballāḷa (II).** The *Mahānāḷprabhu* **Bomma-Gavuḍa** of **Yaguvaṭṭi** made a gift of land to **Bommōja** for constructing the Iśvara temple of **Talara.**

1 ಸ್ವಸ್ತಿ [।*] ಶ್ರೀಮತು ಯಾದವನಾರ-
2 ಯಣ ಪ್ರತಾಪಚಕ್ರವರ್ತ್ತಿ ಹೊಇಸಣ
3 ವೀರಬಲ್ಲಾಳರಾಜ್ಯದ ಬಹುಧಾಂನ್ಯಸಂವ-
4 ಚರದ ಜ್ಯೇಷ್ಟ ಬ ೧೫ ಶ್ರೀಮನುಮ-
5 ಹಾನಾಳುಪ್ರಭು ಯಗುವಟ್ಟಿಯ ಬೊ-
6 ಮ್ಮಗವುಡನು ತಲರದಾ ಇಸ್ವರದೇವರ (ದೇ-
7 ವರ) ದೇವಾಲ್ಯವಂ ಮಾಡಿದ ಬೊಮ್ಮೋಜಂ-
8 ಗೆ ಬೊಮ್ಮಗವುಡನು ಕೊಟ್ಟನು ದೇವಾಲ್ಯದ
9 ರಥವಣಮ[ಂ] ಮೂಲಿಗಕೆಯ್ಯ
10 ಒಳಗಣಕೆಯನು ಕೊಟ್ಟನು ಚಂದ್ರಾ-
11 ರ್ಕ್ಕತಾರಂಭರಂ ॥ ಮ

## No. 336.

(*A.R. No.* 52 *of* 1904).

ON A SLAB SET UP IN FRONT OF THE BOLU-BASAVA TEMPLE AT KUDATINI, BELLARY TALUK, SAME DISTRICT.

This is dated **Śaka 1140, Bahudhānya, Kārtika, puṇṇami, Bṛihaspativāra, Sōmagrahaṇa.** In Bahudhānya = Śaka 1140 (expired) Kārttika śu. 15 corresponded to A.D. 1218 November 4, Sunday (not Thursday) ; but in the next year *i.e.*, Pramāthi, Kārtika Puṇṇame did fall on **Thursday = 24 October A.D. 1219.** Even on that day there was no eclipse. The record belongs to the reign of the Hoysaḷa king **Vīra-Ballāḷa (II).** When **Udayākaradēva-Brahmachāriyarasa,** the five *vargas* of the *sthāna* of **Koṭṭitoṇe,** the ascetics of the five *maṭhas* and numberless *gaṇas* had assembled, the sixty families of the oil-makers set up the god Telligēśvara and made a gift of the cess levied on every sale and purchase, for the service of the god. The gift was made after washing the feet of **Kalyāṇaśakti,** a Śaiva teacher in charge of the institution.

1 ಸ್ವಸ್ತಿ ಶ್ರೀಜಯಾಭ್ಯುದಯಶ್ಚ ॥ ನಮಸ್ತುಂಗಶಿರಶ್ಚುಂಬಿಚ-
2 ಂದ್ರಚಾಮರಚಾರವೇ ತ್ರೈಳೋಕ್ಯನಗರಾರಂಭಮೂಲ-
3 ಸ್ತಂಭಾಯ ಶಂಭವೇ ॥ ನಮಃ ಸ್ವಾಮಿಕುಮಾರಾಯ ದೃಪ್ಯತ್ತಾ-
4 ರಕವಿದ್ವಿಷೇ ಅಧಷ್ಕೃತಮಯೂರಾಯ [ಬಾಣಾ]ದ್ಯಧಿಕಶಕ್ತಯೇ ॥
5 ಸ್ವಸ್ತಿ ಸಮಸ್ತಭುವನಾಶ್ರಯಂ ಶ್ರೀಪ್ರಿಥ್ವೀವಲ್ಲಭಂ ಮಹಾರಾಜಾಧಿ-
6 ರಾಜ ಪರಮೇಶ್ವರಂ ಪರಮಭಟ್ಟಾರಕಂ ಯಾದವಕುಳಾಂಬರ-
7 ದ್ಯುಮಣಿ ಸ(ಂ)ಮ್ಯಕ್ತ್ವಚೂಡಾಮಣಿ ಮಲೆರಾಜರಾಜ ಮಲಪರೊಳುಗಣ್ಡ ಕ-
8 ದನಪ್ರಚಣ್ಡ ಸನಿವಾರಸಿದ್ಧಿ ಗಿರಿದುರ್ಗಮಲ್ಲ ನಿಸ್ಸಂಕಪ್ರತಾಪ ಹೊಯ್ಸ-
9 ಣರಾಯ ವೀರಬಲ್ಲಾಳದೇವರ ವಿಜಯರಾಜ್ಯಮುತ್ತರೋತ್ತರಾಭಿವ್ರಿ-
10 ದ್ಧಿಪ್ರವರ್ದ್ಧಮಾನಮಾಚಂದ್ರಾರ್ಕ್ಕತಾರಂಬರಂ ಸಲಲು ದೋರಸಮುದ್ರ-
11 ದ ನೆಲೆವೀಡಿನೊಳು ಸುಖಸಂಕಥಾವಿನೋದದಿಂ ರಾಜ್ಯಂಗೆಯುತ್ತಮಿರೆ
12 ಸ್ವಸ್ತಿ ಸಮಧಿಗತಪಂಚಮಹಾಶಬ್ದ ಬ್ರತಜಪನಿಯಮಹೋಮ-

13 ಸಂಯುಕ್ತರುಂ ಶ್ರೀಸ್ವಾಮಿಕಾರ್ತಿಕೇಯದೇವತಪೋವನಾಧಿಪತಿಗಳ್ಪ್ರ
14 ಶ್ರೀಮದ್ದಂಡಾಸನಿ ಲೋಹಾಸನಿ ಉದೆಯಾಕರದೇವಬ್ರಹ್ಮ-
15 ಚಾರಿಯರಸರು ಮುಖ್ಯವಾಗಿ ಕೊಟ್ಟಿತೊಣೆಯ ಸ್ಥಾನದಯ್ದುಂ
16 ವರ್ಗ್ಗಂಗಳುಂ ।। ಪಂಚಮಠಸ್ಥಾನದ ತಪೋಧನರುಂ । ಅಸಂ-
17 ಖ್ಯಾತಗಣಗಳುಂ ಮಹಾಸಭೆಯಾಗಿ ನೆರದಲ್ಲಿ ಬ್ರಹ್ಮಚಾರಿಯ[ರ]ಸರ
18 ಸ್ಥಾನದಯ್ದುವರ್ಗ್ಗಂಗಳ ಕಯ್ಯಲು ಗಾಣದೆಱವತ್ತೊಕ್ಕಲುಗಳೆಲ್ಲರುಂ ನೆ-
19 ರದು ಯಜಮಾನರಲು ಧರ್ಮ್ಮವ ಮಾಡಲನುಜ್ಞೆಯಂ ಪಡದು
20 ಶ್ರೀತಲ್ಲಿಗೇಶ್ವರದೇವರಂ ಶುಭದಿನಮುಹೂರ್ತ್ತದಲು ಇ ಪ್ರತಿಷ್ಠೆಯ ಮಾಡಿ
21 ದೇವರಂಗಭೋಗಖಣ್ಡಸ್ಫುಟಿತಜೀರ್ಣ್ನೋದ್ಧಾರನಂದಾದೀವಿಗೆಗೆ ಸಲ್ವಂತಾಗಿ
22 [ಶ]ಕವರ್ಷ ೧೧೪೦ ನೆಯ ಬಹುಧಾ(ಂ)ನ್ಯಸಂವತ್ಸರದ ಕಾರ್ತ್ತಿಕದ ಪು-
23 ಣ್ಣಮಿ ಬೃಹಸ್ಪತಿವಾರ ಸೋಮಗ್ರಹಣದಲು ಕಲ್ಯಾಣಶಕ್ತಿಗುರು-
24 ಗಳ ಪಾದಪ್ರಕ್ಷಾಳನಂ ಮಾಡಿ ಧಾರಾಪೂರ್ವ್ವಕಮಾಗಿ ಆಚಂದ್ರಾರ್ಕ್ಕ-
25 ತಾರಂಬರಂ ನಡೆಸಂತಾಗಿ ಕೊಟ್ಟಾಯ ತೆಲ್ಲಿಗರು ಎಳ್ಳ ಮಾಱಿಕೊಂಡವ-
26 ಗು ಹೊಂಗೆ ಕಟ್ಟಿದಲಗಿನ ಚಿಕ್ಕತಾರವ ತೆಱುವರು ಬೆಳಯ ತಾರದರ್ದ್ದದ ।।
27 ಎಣ್ಣೆಯನು ಗಾಣಕ್ಕೆ ನಿಚ್ಚಲು ಅರ್ದ್ಧಸೊಲ್ಲಿಗೆಯನು ಆಡಿತಕ್ಕ ಎಱೆವರು ।।

## No. 337.

(*A.R. No.* 218 *of* 1918.)

ON A BEAM IN THE MALLIKARJUNASVAMI TEMPLE AT KURUVATTI, HARAPANAHALLI TALUK, SAME DISTRICT.

This undated record refers itself to the reign of the Hoysaḷa king **Vīra-Ballāḷa.** The *Mahāmaṇḍalēśvara* **Gommadēva,** expert in *śāstra* and *śastra,* and promoter of the glory of the **Yādavas,** is said to have made a gift of 36 *mattars* of land to the north of **Haṟuhe** in **Beṇṇeyūru twelve** for the service of the god Āhavamallēśvara and placed it in the charge of **Lōkābharaṇa.** Since this Lōkābharaṇa is also mentioned in a record of **Ballāḷa II,** the present inscription may belong to that king's reign.

1 ಓಂ ನಮಃ ಶಿವಾಯ ।। ಜಯತ್ಯಾಹವಮಲ್ಲೇಶಃ । ಶೇಖರೀಕೃತಚಂದ್ರಮಾಃ ।। ಯತ್ಪಾದಪಂಕಜೇ ನಿತ್ಯ-
2 ಮಮರ್ತ್ಯೈರ್ಬ್ಭ್ರಮರಾಯಿತಂ ।। ಸ್ವಸ್ತಿ ಶ್ರೀಮತ್ಪ್ರತಾಪಚಕ್ರವರ್ತ್ತಿ ರಾಯನಾರಾಯಣ ಹೊಯ್ಸಣ
3 ವೀರಬಲ್ಲಾಳದೇವವಿಜಯರಾಜ್ಯಂ ಸಲುತ್ತವಿರೆ ತತ್ಪಾದಪದ್ಮೋಪಜೀವಿ । ಸ್ವಸ್ತಿ ಸಮಧಿಗತಪಂಚಮ-
4 ಹಾಶಬ್ದ ಮಹಾಮಂಡಳೇಶ್ವರಂ । ದ್ವಾರಾವತೀಪುರವರಾಧೀಶ್ವರಂ । ನಿಜಭುಜಬಳೋಪಾರ್ಜ್ಜಿತವಿಜ-
ಯಲ-
5 ಕ್ಷ್ಮೀಕಾಂತಂ ಪರಬಳಕೃತಾಂತಂ ಅನೇಕಶಸ್ತ್ರಶಾಸ್ತ್ರಪಾರಾವಾರಪರಾಯಣಂ । ಮಂಡಳಿಕನಾರಾಯಣ
6 ಯಾದವಕುಳಕುಮುದಿನೀನಿಶಾಕರಂ ! ಸತ್ಯರತ್ನಾಕರಂ ! ನೀತಿಚಾಣಿಕ್ಯಂ । ಅಮೋಘವಾಕ್ಯಂ । ಶಂಖ-
ಚಕ್ರಗದಾಧರಂ ಸಕಳ-
7 ಕಳಾಧರಂ । ಸಿಂದಸಿಗುಣಾನ್ವಯಪ್ರಸೂತಂ । ಲೋಕವಿಖ್ಯಾತಂ । ಚಲದಂಕರಾಮಂ । ಭುಜಬಳಭೀಮಂ
ಅಸಹಾಯಸಮರ್ತ್ಥ
8 ಗಂಡರತೀರ್ತ್ಥಂ ವೀರಗೋಮದೇವರು ಶ್ರೀಮದಾಹವಮಲ್ಲೇಶ್ವರದೇವರ್ಗ್ಗೆ ಖಂಡಸ್ಫುಟಿತಜೀರ್ಣ್ನೋ-
ದ್ಧಾರಾಂಗಭೋಗರಂಗಭೋಗ-
9 ಕ್ಕೆ ಬೆ(ಂ)ಣ್ಣೆಯೂರ್ಪ್ಪ(ಂ)ನ್ನೆರಡಱ ಬಳಿಯ ಬಾಡಂ । ಹಱುಹೆಯಿಂ ಬಡಗಲು ಪಾಂಡ್ಯದೇವನ ಬಲ್ಮ-
ನುಕ್ಯ-
10 ರು ಬೆ(ಂ)ಣ್ಣೆಯೂರ ಚಂಡುಗಿದೇವನುಂ ಕಾಳಗೌಡನುಂ ।। ಹಱುಹೆಗಿದುತ್ತರವೆನಿಸಲ್ಕುಱುವತ್ತಿಯ
ದಕ್ಷಿಣಂ ಸ್ವಪೂರ್ವ್ವ-
11 ಮೂಂವತ್ತಱು ಮತ್ತರು ಕೆಂಮೊಗೆಯಂ ನೆಱೆ ಲೋಕಾಭರಣಚರಣಭಕ್ತಿಯೊಳತ್ತರು ।। [ಮಂಗಳ]
ಶ್ರೀ [।।*]

## No. 338.

(*A. R. No.* 320 *of* 1925.)

ON A STONE PLANTED IN FRONT OF THE MURUKAL-MATHA AT KOTTUR, KUDLIGI TALUK, SAME DISTRICT.

This is dated the cyclic year **Vishu, Āshāḍha, ba. 5, Sunday,** corresponding to **A.D. 1221, July 11, Sunday.** Hence the Hoysaḷa king **Vīra-Narasiṁha** to whose reign the record belongs may be the second of that name. His general, **Kēśava-Daṇḍanāyaka,** who is stated here to have been the cause of the expansion of his kingdom, made a gift of the village **Māvinamāge** to **Śaṅkaranārāyaṇa-Bhaṭṭa, Bhēruṇḍana-Bammayya, Achyuta-Bhaṭṭa** and to **Nāga,** (son ) of **Chīlaya-Nāyaka** for the purpose of maintaining a *satra* (feeding house) and appointed the *Mummuridaṇḍas*, **Hariga Kāḷa-Bōva, Jagaddaḷa-Bammadēva's** son **Sōyidēva** and **Ghaṭṭidēva** for the protection of the charity. *Sēnābōva* **Sōmayya** wrote this and the mason, Aṇṇōja engraved it. We know from other records that Kēśava was a Brāhman general. It also records a grant of land to the god Uḍakēśvaradēva by the *Mantri* **Muktidēva.**

1 ಶ್ರೀಶಂಕರನಾರಾಯಣಾಯನಮಃ ॥ ಜೀಯಂ ಕೀರ್ತ್ತಿಪ್ರಿಯನೋ .
2 ಬೆಂಬಂ ಕೇಶವಮಂತ್ರಿಪುಂಗವಂ ಕೂರ್ತ್ತಿತ್ತಂ ಶಂಕರನಾರಾಯ-
3 ಣನೆಂಬಂಕದ ಭಟ್ಟಂಗೆ ಸಂದ ಮಾವಿನಮಾಗೆಯಂ ॥ ಸೋಮಂ ಸುವಿಕ್ರಮಪಾಳರಣೋ-
4 ವದೆ ಕೊಂದಿಕ್ಕಿ ಬೆಂಬೆಯಂ ಕೇಶವನು ಭೂವಿನುತರೊಸೆದು ಕೊಟ್ಟರು ಮಾವಿನಮಾ-
5 ಗೆಯೆಂಬ ಹಳ್ಳಿಯಂ ಜಗವತಿಯಲುರ್ವಿಯಧಿಪತಿ ನರಸಿಂಹ್ವನ ರಾಜ್ಯ-
6 ದೊಳೀ ಕೊಟ್ಟೂರ ಹಳ್ಳಿ ಮಾವಿನಮಾಗೆಯಂ ಮುದದಿಂ ಜಗದೊಳ್ ಸೋಯಿ-
7 ಯ ವುದಿತೋದಿತಮಾಗಿ ಕೊಟ್ಟರಾಚಂದ್ರಾರ್ಕ್ಕಂ ॥ ಸ್ವಸ್ತಿ ಸಮಸ್ತಪ್ರಸಸ್ತಿಸಹಿ-
8 ತಂ ಶ್ರೀಮನುಮಹಾರಾಜಾಧಿರಾಜಂ ಪ್ರತಾಪಚಕ್ರವರ್ತ್ತಿ ಮಲೆರಾ-
9 ಜರಾಜ ಮಲಪರೊಳು ಗಂಡ ಕದನಪ್ರಚಂಡ ಯಾದವಕುಳಸ್ವಾಮಣಿ ಸದ್ರಾಜಚೂಡಾ-
10 ಮಣಿ ಹೋಶಣವೀರನಾರಸಿಂಹದೇವರಾಜ್ಯಾಭ್ಯುದಯಕರಣಕಾರಣ ಭುಜಬಳ-
11 ಭೀಮ ಪರಬಳಸಾಧಕ ಬೆಂಬಿದೇವ ಕೇಶವದಂಡಾಧಿಪಂ ಕಾದ ಗೆಲುದಂ ವಿಷುಸಂವತ್ಸ-
12 ರದಯಾಶಾಡ ಬಹುಳ ೫ ಯಾದಿವಾರದಂದು ರಾಯಭಟ್ಟ ಶಂಕರನಾರಾಯಣ-
13 ನೆಂಬ ಭಟ್ಟಂಗೆ ಭೇರುಂಡನ ಬಂಮಯನೆಂಬ ಭಟ್ಟಂಗೆ ಯಚ್ಯುತನೆಂಬ ಭಟ್ಟಂಗೆ ಚೀಲಯ-
14 ನಾಯಕನ ನಾಗಂಗೆ ಮಾವಿನಮಾಗೆಯೆಂಬ ಹಳ್ಳಿಯಂ ಕೊಟ್ಟ ಸತ್ರಕ್ಕೆ ಯೆರ-
15 ಡು ಹಂನೆರಡೞ ಪ್ರಭುಗಳು ಮುಂಮುರಿದಂಡ ಪಟ್ಟಣಸ್ವಾಮಿಗಳು ಹಟ್ಟ-
16 ಗಾಱ ಹರಿಗ ಕಾಳಬೋವ ಮಂಡಳಿಕ ಜಗದ್ದಳ ಬಂಮಿದೇವನ ಸುಪುತ್ರ
17 ಸೋಯಿದೇವ ಘಟ್ಟಿದೇವ ಯೀ ಧರ್ಮ್ಮವಂ ಸ್ವಧರ್ಮದಿಂ ಪ್ರತಿಪಾಳಿಸಿದರು ಯೀ ಧರ್ಮ್ಮಕ್ಕೆ ಯಾ-
18 ವನಾನು ಕಂಟಕನಾದವಂಗೆ ಗಂಗಾತೀರದಲ್ಲಿ ಸಾಯಿರ ಬ್ರಾಹ್ಮ-
19 ಣರುಮಂ ಸಾಯಿರ ಕವುಲೆಯ ಕೊಂದಂತಹ ನರಕ ಈ ಧರ್ಮ್ಮವಂ ಯಾರಯಿ-
20 ದು ರಕ್ಷಿ[ಸಿ*]ದವಂಗೆ ಯಾ ಬ್ರಾಹ್ಮಣರಿಂಗೆ ಯಾ ಗಂಗಾತೀರದಲ್ಲಿಯಾ ಕವುಲೆಗಳಂ ಕೊ-
21 ಟ್ಟ ಫಲ ಯೀ ಸಾಸನವಂ ಯಯ್ಯಾವಳಯ ಸೇನಬೋವ ಸೋಮಯ್ಯ ಯೀ ಸಾ[ಸ*]ನ-
22 ... ಖಂಡಳಿಸಿದಾತ ಕಲುಕುಟಿಗ ಅಣ್ಣೋಜ ಮಂಗಳ ಮಹಾಶ್ರೀ ಶ್ರೀ ◎
23 ಶ್ರೀಮತುಡಕೇಶ್ವರದೇವರಿಗೆ ಮಂತ್ರಿ ಮೂರ್ತ್ತಿದೇವರು ತಾವು ಹಡದ ಕೆಯಿಂ ಹೊಲಗೇರಿ-
24 ಯ ಪಡೊವಲು ಮತ್ತರು ೪ ಬೆಂಟೇಶ್ವರದ ಗದೆಯಿಂದ ದೇವರ ಬಡಗಣ ಗದೆ ೨೦ ಕಾನಿ . . . .
25 . ಧಾರಾಪೂರ್ವ್ವಕವಾಗಿ ಕೊಟ್ಟರು ಆ ದೇವರ ತಪೋಧನ ಬೈಚಜೀಯ ಆತನ ತಂಮ ಮಲ್ಲ-
26 ಜೀಯ ತಂಮ ಸಕಲಸಾಮ್ಯದೊಳಗೆ ತಮಗೆ ಎರಡು ಭಾಗೆ ಮಂತ್ರಮೂರ್ತ್ತಿಗಳಿಗೆವೆರ-
27 ಡಂ ಭಾಗಿಯಂ ಕೊಟ್ಟರು । ಶ್ರೀ ।

## No. 339.

(*A. R. No.* 281 *of* 1918.)

ON A SLAB LYING IN A FIELD TO THE SOUTH OF ANIJIGERE, HARAPANAHALLI TALUK, SAME DISTRICT.

The record is dated **Śaka 1145, Chitrabhānu, Pushya, ba. 8, Sōmavāra, Uttarāyaṇa saṅkramaṇa, Vyatīpāta** corresponding to **A.D. 1222, December 28, Monday,** on which day the *tithi* commenced after ·52 ; the Śaka year was current. The inscription refers itself to the reign of the Hoysaḷa king **Vīra-Nārasiṁhadēva.** When his *Mahāpradhāna* **Ammaṇṇa-Daṇṇāyaka** was administering all the *dēśas,* the latter's subordinate, **Asagōḍa Pallava-Sāvanta** of the **Sonda-kula,** who was the *Māhānālprabhu* of the **Sāvira-nāḍu** made a gift of some plots of land (specified) for the service of the god Kalidēva in the village **Kūchigōḷa,** which was situated in **Uchchaṅgi thirty.** Both Ammaṇṇa and Asagōḍa Pallava are said to have been great warriors.

1 ೧ ನಮಸ್ತುಂಗಶಿರಸ್ತುಂಬಿಚಂದ್ರಚಾಮರಚಾ-
2 ರವೇ ತ್ರೈಳೋಕ್ಯನಗರಾರಂಭ(ಂ)ಮೂಲಸ್ತಂ-
3 ಭಾಯ ಸಂಭವೇ ॥
4 [ಸ್ವ]ಸ್ತಿ ಸಮಸ್ತಭುವನಾಶ್ರಯ ಶ್ರೀಪ್ರಿಥ್ವೀವಲ್ಲಭ ಮ-
5 ಹಾರಾಜಾಧಿರಾಜಂ ಪರಮೇಶ್ವರ ಪರಮಭಟ್ಟಾರಕಂ ದ್ವಾರ-
6 ವತೀಪುರವರಾಧೀಶ್ವರಂ ಯಾದವಕುಳಾಂಬರದ್ಯುಮಣಿ
7 ಸರ್ವ್ವಜ್ಞಚೂಡಾಮಣಿ ಮಲೆರಾಜರಾಜ ಮಲಪರೊ-
8 ಳುಗಂಡ ಗಂಡಭೇರುಂಡ ಕದನಪ್ರಚಂಡನಸಹಾಯ-
9 ಶೂರನೇಕಾಂಗವೀರ ಶನಿವಾರಸಿದ್ಧಿ ಗಿರಿದುರ್ಗ್ಗಮಲ್ಲ ಚ-
10 ಲದಂಕರಾಮ ಮಗರರಾಜ್ಯನಿರ್ಮೂಳನಂ ಪಾಂಡ್ಯರಾಜ್ಯ
11 ದಿಶಾಪಟನುಂ ಚೋಳರಾಜ್ಯಪ್ರತಿಷ್ಠಾಚಾರ್ಯ್ಯ
12 ನಿಸ್ಸಂಕಪ್ರತಾಪಚಕ್ರವರ್ತ್ತಿ ಹೊಯಿಸಣ ಶ್ರೀವೀ-
13 ರನಾರಸಿಂಹದೇವರ ರಾಜ್ಯಮುತ್ತರೋತ್ತರಾಭಿವ್ರಿದ್ಧಿಪ್ರ-
14 ವರ್ದ್ಧಮಾನಮಾಗೆ ಯಾಚಂದ್ರಾರ್ಕ್ಕತಾರಂಬರಂ ಸಲುತ್ತಮಿ-
15 ರೆ ತತ್ಪಾದಪದ್ಮೋಪಜೀವಿ.ಶ್ರೀಮನುಮಹಾಪ್ರಧಾನಂ ಸ-
16 ರ್ವ್ವಾಧಿಕಾರಿ ಮಹಾಪಸಾಯಿತಂ ಪರಮವಿಶ್ವಾಸಿ ರಾಯದಂಡನಾ-
17 ಥ ಅಂಮಣ್ಣದಣ್ಣಾಯಕರು ಸಮಸ್ತರಾಜ್ಯಭರನಿರೂಪಸಮುದ್ಧ-
18 ರಣದುಷ್ಟನಿಗ್ರ[ಹ*]ಶಿಷ್ಟಪ್ರತಿಪಾಳನೆಯಿಂ ಸಮಸ್ತದೇಶಾಧಿಕಾರಂ ಮಾಡು-
19 ತ್ತಮಿರೆ ತತ್ಪಾದಪದ್ಮೋಪಜೀವಿ ಸ್ವಸ್ತಿ ಸಮಸ್ತವಸುಧಾತಳಪ್ರಖ್ಯಾತನುಂ
20 ಸತ್ಕುಲೋದ್ಭೂತನುಂ ಸೊಂದೆಕುಲಕಮಳಮಾರ್ತ್ತಂಡನುಂ ನುಡಿದಂತೆ
21 ಗಂಡನುಂ ಉಚ್ಚಂಗೀದೇವಿಯ ಲಬ್ಧವರಪ್ರಸಾದಾಧಿಪತ್ಯನುಂ ಮಸುವ-
22 ರಾದಿತ್ಯನುಂ ಮಱೆವುಗೆಕಾವನುಂ ಶರಣಾಗತವಜ್ರಪಂಜರನುಂ ಅಸಂ-
23 ಖ್ಯಾತಮಾಹೇಶ್ವರಗಣಕುಮಾರನುಂ ಶ್ರೀಸ್ವಯಂಭುದೇವರ ದಿ-
24 ವ್ಯಶ್ರೀಪಾದಪದ್ಮಾರಾಧಕಂ ಸಾವಿರನಾಡ ಶ್ರೀಮನುಮಹಾನಾಳ್ಪ್ರ-
25 ಭು ಅಸಗೋಡ ಪಲ್ಲವಸಾವಂತನು ಉಚ್ಚಂಗಿ ಮೂವತ್ತಱೊಳು
22 ತಂನ ಪ್ರಭುತ್ತಿಕೆಯ ಕೂಚಿಗೋಳದ ಮೂಲಸ್ಥಾನ ಕಲಿದೇವ
27 . . . . . . ನಿವೇದ್ಯಕ್ಕಂ ನಂದಾದೀವಿಗೆಗಂ ಖಂಡಸ್ಫುಟಿತಜೀರ್ಣ್ನೋದ್ಧಾರಕ್ಕಂ ಬಿಟ್ಟ
28 ದತ್ತಿ ಸಕವರ್ಷದ [೧]೧೪೫ ನೆಯ ಚಿತ್ರಭಾನುಸಂವತ್ಸರದ ಪುಶ್ಯ ಬಹು-
29 ಳ ಅಷ್ಟಮೀ ಸೋಮವಾರ ಉತ್ತರಾಯಣಸಂಕ್ರಮಣ ವ್ಯತೀಪಾತದೊಳು
30 ಬಿಟ್ಟ ಭೂಮಿ ಹಿರಿಯಕೆ . . . . . . . . . . ೦ಬಿನಗದ್ದೆ ಪಡ-
31 ವಣ ಹಳುಗು ಸಹಿತ ಕಂಮ . . . . . . . . . . ಚಿಕ್ಕ
32 ತೋಟವೆ ಗದ್ದೆ ಕಂಮವಿಂನೂಱು ೨೦೦ . . . . . . . . ಲಗೆ

33 ಮೂಱು ಮತ್ತರು ಮ ೩ ದೇವರ ಮುಂದಣ . . . . . . . . . .
34 ಮನಿ ಬೆಂಚಿಮೆಯನ ಕಟ್ಟೆಯಲಿ ರಾವೆಗಟ್ಟದ ವಾ . . . . . . . .
35 ಣ ಮತ್ತರೆರಡು ಮ ೨ ಮಂ ಶಿವತೀರ್ತ್ಥದ ನೀರುಭೂಮಿ ಕೀಳುಭೂ[ಮಿ]
36 ಸಹಿತ ಸ್ವಸ್ತಿ ಯಮನಿಯಮಧ್ಯಾನಧಾರಣಮೌನಾನುಷ್ಠಾನಜ-
37 ಪಸಮಾಧಿಶೀಲಗುಣಸಂಪಂನರಪ್ಪ ಆಳುವಪಂಡಿತರ ಮಂಮ ಕೇಶವರಾ-
38 ಜಪಂಡಿತರ ಕಾಲಂ ಕಚ್ಚಿ ಧಾರಾಪೂರ್ವ್ವಕಂ ಮಾಡಿಕೊಟ್ಟನಿನ್ತೀ ಧರ್ಮ್ಮವ-
39 ನಾರು ಪ್ರತಿಪಾಲಿಸಿದಡಂ ವಾರಣಾಸಿಯಲು ಯೇಳುನೂಱು
40 ಮನುಕ್ಷ್ಯ ಸಬ್ರಾಹ್ಮಣರಿಗೇಳುನೂಱು ಕವಿಲೆಯ ಸದಕ್ಷಿಣೆ ಸಹಿ-
41 ತ ದಾನಮಾಡಿದ ಫಲಮಕ್ಕು ಇಂತೀ ಧರ್ಮ್ಮವನಾರು ಕೆಡಿಸಿದಡಂ ವಾರ-
42 ಣಾಸಿಯಲೇಳ್ನೂಱು ಮನುಕ್ಷ್ಯ ಬ್ರಾಹ್ಮಣರನೂ ಯೇಳ್ನೂಱು
43 ಕವಿಲೆಯನೂ ಕೊಂದ ದೋಷಮಕ್ಕು ॥

## No. 340.

(*A. R. No.* 116 *of* 1913.)

ON THE FOURTH SLAB SET UP IN THE COURT-YARD IN THE BHIMESVARA TEMPLE AT NILAGUNDA, SAME TALUK AND DISTRICT.

This is dated **Śaka 1145 Subhānu, [Mā]gha, śu. 11, Bṛihaspativāra** corresponding to **A. D. 1224 February 1 Thursday,** f.d.t. ·87. It belongs to the reign of the Hoysaḷa king **Narasiṁhadēva (II).** His father **Ballāḷa** is stated to have driven out single-handed the **Sēvaṇa** army from **Soraṭūr** up to the bank of the **Kṛishṇavēṇī river,** being mounted on his elephant. It registers the gift of some village (name lost) for the service of the god Bhīmēśvara.

1 ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ
2 ತ್ರಯಿಳೋಕ್ಯನಗರಾರಂಭಮೂಲಸ್ತಂಭಾಯ
3 ಶಂಭವೇ ॥ ಎರಡುಂ ಲಕ್ಕಂಬರಂ ಸುತ್ತಣಯಃರಸನಿಸಂನಾಹದಿಂ ಪ-
4 ಂನೆರಡುಸಾವಿಂವರಃಶಶ್ರೇಣಿವ್ರೋಲಂ ಕವಣಿಯಃ ಮಣಿಯ ಪರಿ-
5 ಯಾಣದಿಂ ತೋರ್ಕೆವೆತ್ತ್ಯುರೆ ಠಂನೊಂದಾನೆಯಿಂ ಸೇವುಣನೃಪಬಳ-
6 ಮಂ ನೂಂಕಿ ಬೆಂನಟ್ಟಿ ಕೊಂದಂ ಸೊರಟೂರಿಂ ಕೃಷ್ಣವೇಣಿಯಃ ನದಿಯ ತ-
7 ಡಿವರಂ ವೀರಬಲ್ಲಾಳರಾಯಂ ॥ ಕಲಿಬಲ್ಲಾಳನೃಪಾಳಕಂಗವಧಿಕೈಶ್ವರ್ಯ್ಯ-
8 ಕಡಪಾರ್ದ ಪದುಮಲಮಾದೇವಿಗಮುಳಿತಿಂದ ವುದಯಂಗೆಯಿದಂ ನರಸಿ-
9 ಂಹಾಧಿಪಂ ಲಲನಾಮೋಹನಮೂರ್ತ್ತಿ ಕೀರ್ತ್ತಿರಮಣಂ ಸಾಹಿತ್ಯರತ್ನಾಕರಂ ಬಳ-
10 ವದ್ವೈಯಿರಿನೃಪಾಳಕಾಳಕಃಳಕಂ . . . . . . ಕಲ್ಪದ್ರುಮಂ ॥ ಮೊದಲೊ-
11 ಳು ವಿಕ್ರಮಪಾಳ ಪಾಂಸರನಿತ್ತಲುಕೊಂದ . . . ಳ್ಪಿದರ್ನಾಕಾಡವರಾಯನಂ
12 ಮಗರನಂ ಪಾಂಡ್ಯನಂ ಕೊಂದನು ನಾಮದವ . . . ಪಟ್ಟಮನದಂ ಚೋಳಂಗೆ ಮುಂ-
13 ದಿಟು ಕಟ್ಟಿದನಾಸೇತುವಿನೊಳು ನರಸಿಂಹದೇವ . . . . . . ಸ್ತಂಭಮಂ । ಗದ್ಯ ॥
14 ಸ್ವಸ್ತಿ ಸಮಸ್ತಭುವನಾಶ್ರಯಂ . . . . ಮಹಾರಾಜಾಧಿರಾಜಂ ದ್ವಾರವ-
15 ತೀಪುರವರಾಧೀಶ್ವರಂ ಯದುಸಂ . . . . . ಸರ್ವ್ವಜ್ಞಚೂಡಾಮ-
16 ಣಿ ಮಲೆರಾಜರಾಜಂ ಮಲೆಪರೊಳು . . . . ವಾರಸಿದ್ಧಿ ಗಿರಿದುರ್ಗ್ಗಮ-
17 ಲ್ಲ ನಿಸ್ಸಂಕಪ್ರತಾಪಚಕ್ರವರ್ತ್ತಿ ಹೊಯ್ಸಣ . . . . ವನು ನಿಜರಾಜಧಾನಿ
18 ದೋರಸಮುದ್ರದೊಳಃ ಸುಖಸಂಕಥಾ . . . . . ಳುತ್ತಿರ್ದ್ದ ಪ್ರಸ್ತಾವದೊಳಂ ॥
19 ಶಕವರುಶ ೧೧೪೫ ನೆಯ ಸ್ವಭಾನುಸಂವ . . . . ಘ ಸು ೧೧ ಬ್ರುಹವಾರ-
20 ದಂದು ನೊಣಂಬವಾಡಿ ಮೂವತ್ತಿ . . . . . ಶ್ರೀಮತು ಜನಮೇವೆಯ-
21 ದತ್ತಿಯಾದ ಅನಾದಿಯಗ್ರಹಾರ . . . . . ಭೀಮೇಶ್ವರದೇವರಿಗೆ ಅಂ-
22 ಗಭೋಗರಂಗಭೋಗಉಪಾರಕ್ಕಂ . . . ಸನಕ್ಕೆ ಮೂನೂರ್ವ್ವರಿಗೆಉಂವಾಗಿ
23 ಮಾಚಿಯಹಳ್ಳಿಯ ಮೂಡಣಯ . . . . . ಬಹಳ್ಳಿಯನು ಧಾರಾಪೂ-

